

ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ಪದವಿಯ ಸಂಪ್ರಬಂಧ

# "ಕನಕದಾಸರ [illegible] ಕೀರ್ತನೆಗಳು" - ಒಂದು ಅಧ್ಯಯನ


ಸಂಶೋಧಕರು : ವಾಣಿ ಬಿ.ಎಸ್.





ಮಾರ್ಗದರ್ಶಕರು : ಡಾ|| ಕೆ. ರಮಾನಂದ

ಪ್ರೊಫೆಸರ್ ಮತ್ತು ವಿಭಾಗದ ಮುಖ್ಯಸ್ಥರು,

ಕನ್ನಡ ವಿಭಾಗ, ಸಿಂಧಿ ಕಾಲೇಜು,

ಕೆಂಪಾಪುರ, ಹೆಬ್ಬಾಳ, ಬೆಂಗಳೂರು-೫೬೦೦೨೪





ಎಂ.ವಿ. ಸೀತಾರಾಮಯ್ಯ ಸ್ನಾತಕೋತ್ತರ ಸಂಶೋಧನ ಕೇಂದ್ರ,

ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ,

ಬೆಂಗಳೂರು.

೨೦೧೩-೧೪



ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ಪದವಿಯ ಸಂಪ್ರಬಂಧ

# "ಕನಕದಾಸರ ಸಮಾಜಮುಖಿ ಕೀರ್ತನೆಗಳು" – ಒಂದು ಅಧ್ಯಯನ

ಸಂಶೋಧಕರು : ವಾಣಿ ಬಿ.ಎಸ್.



ಮಾರ್ಗದರ್ಶಕರು : ಡಾ॥ ಕೆ. ರಮಾನಂದ
ಪ್ರೊಫೆಸರ್ ಮತ್ತು ವಿಭಾಗದ ಮುಖ್ಯಸ್ಥರು,
ಕನ್ನಡ ವಿಭಾಗ, ಸಿಂಧಿ ಕಾಲೇಜು,
ಕೆಂಪಾಪುರ, ಹೆಬ್ಬಾಳ, ಬೆಂಗಳೂರು-೫೬೦೦೨೪



ಎಂ.ವಿ. ಸೀತಾರಾಮಯ್ಯ ಸ್ನಾತಕೋತ್ತರ ಸಂಶೋಧನ ಕೇಂದ್ರ,
ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ,
ಬೆಂಗಳೂರು.
೨೦೧೩-೧೪

# ಸಂಶೋಧಕರ ದೃಢೀಕರಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ 2013–14ರ ಸಾಲಿನ ಎಂ.ಫಿಲ್. ಪದವಿಗಾಗಿ, 'ಕನಕದಾಸರ ಸಮಾಜಮುಖಿ ಕೀರ್ತನೆಗಳು'– ಒಂದು ಅಧ್ಯಯನ. – ಎನ್ನುವ ಪ್ರಬಂಧವನ್ನು ವಾಣಿ ಬಿ.ಎಸ್. ಆದ ನಾನು ಡಾ. ಕೆ. ರಮಾನಂದ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆ ಆಗಿದ್ದು, 'ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ. ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ.' ಎಂದು ಈ ಮೂಲಕ ನಾನು ದೃಢೀಕರಿಸುತ್ತೇನೆ.

Vani B.S.

ದಿನಾಂಕ : 23/07/2014
ಸ್ಥಳ : ಬೆಂಗಳೂರು.

ವಾಣಿ.ಬಿ.ಎಸ್.
ಸಂಶೋಧಕಿ.
ಬಿ.ಎಂ.ಶ್ರೀ.ಸ್ನಾತಕೋತ್ತರ ಸಂಶೋಧನ ಕೇಂದ್ರ,
ಬೆಂಗಳೂರು.

# ಮಾರ್ಗದರ್ಶಕರ ದೃಢೀಕರಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ 2013-14ರ ಸಾಲಿನ ಎಂ.ಫಿಲ್. ಪದವಿಗಾಗಿ, 'ಕನಕದಾಸರ ಸಮಾಜಮುಖಿ ಕೀರ್ತನೆಗಳು'- ಒಂದು ಅಧ್ಯಯನ. - ಎನ್ನುವ ಪ್ರಬಂಧವನ್ನು ವಾಣಿ ಬಿ.ಎಸ್. ಸಂಶೋಧಕರಾಗಿ, ಡಾ. ಕೆ. ರಮಾನಂದ ಆದ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ಸಂಶೋಧಕಿಯ ಸ್ವಂತ ಬರವಣಿಗೆ ಆಗಿದ್ದು, 'ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ. ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ.' ಎಂದು ಈ ಮೂಲಕ ದೃಢೀಕರಿಸುತ್ತಾರೆ.

K. Ramananda

ದಿನಾಂಕ : 23.7.2014

ಸ್ಥಳ : ಬೆಂಗಳೂರು.

ಡಾ. ಕೆ. ರಮಾನಂದ
ಮಾರ್ಗದರ್ಶಕರು,
ಬಿ.ಎಂ.ಶ್ರೀ.ಸ್ನಾತಕೋತ್ತರ ಸಂಶೋಧನ ಕೇಂದ್ರ,
ಬೆಂಗಳೂರು.

ಮುಖ್ಯಸ್ಥರು
ಕನ್ನಡ ವಿಭಾಗ
ಸಿಂಧಿ ಕಾಲೇಜು,
ಬೆಂಗಳೂರು - 560 024.

## *** ಪರಿವಿಡಿ ***



*** ** ***

## ಅಧ್ಯಾಯ – ೧. : ಪ್ರಸ್ತಾವನೆ

"ದಾಸ ಪರಂಪರೆ"ಗೆ, "ಹರಿದಾಸ ಸಾಹಿತ್ಯ"ಕ್ಕೆ ಕನಕದಾಸರ ಕೊಡುಗೆ ಬಹುದೊಡ್ಡದು. ಅದಕ್ಕಿಂತ ಹೆಚ್ಚಾಗಿ ಅವರ ಸಮಾಜಮುಖಿ ಕೀರ್ತನೆಗಳು ಕರ್ನಾಟಕದ ಕೆಳವರ್ಗದ ಜನರ ಜನಜೀವನದ ಪ್ರತಿಬಿಂಬವನ್ನು ಚಿತ್ರಿಸಿರುವ ರೀತಿ; ಚಾರಿತ್ರ್ಯ ನಿರ್ಮಾಣ ಮಾಡಿರುವ ಹರಿದಾಸರಲ್ಲಿ ಇವರನ್ನು ಪ್ರಥಮ ಸ್ಥಾನದಲ್ಲಿ ನಿಲ್ಲಿಸಿದೆ.

ಕನಕದಾಸರದು ವಿಶಿಷ್ಟ ವ್ಯಕ್ತಿತ್ವ, ಅದ್ಭುತ ಪ್ರತಿಭೆಯ ಕವಿ ಹಾಗೂ ಕೀರ್ತನಕಾರರು. ಅಷ್ಟೇ ಅಲ್ಲ ಸಂಸಾರಿಯಾಗಿ, ಸಂತನಾಗಿ, ಜ್ಞಾನಿಯಾಗಿ ಮೆರೆದವರು.[೧]

ಒಂದುಕಡೆ ಭಕ್ತಿಯ ವಿಧಾನವನ್ನು ಭಕ್ತರ– ಅಜ್ಞರ ಕಡೆಗೆ ತರುವ ಪ್ರಯತ್ನ ಮಾಡಿದರೆ ; ಮತ್ತೊಂದು ಕಡೆ ಸಮಾಜದೊಳಗಿನ ಅನಾಚಾರ–ಮೌಢ್ಯಗಳ ಶುದ್ಧೀಕರಣಕ್ಕೆ ತೊಡಗುತ್ತಾರೆ. ಅದಕ್ಕಾಗಿ ಕನಕದಾಸರು ಇಲ್ಲಿ ಬಳಸಿದ ಸಾಧನವೇ "ಹರಿದಾಸ ಸಾಹಿತ್ಯ"ವಾಗಿದೆ. ಅದನ್ನವರು ಜನಸಾಮಾನ್ಯರ ಆಡುಭಾಷೆಯಲ್ಲಿ ಜನಪದ ಸೊಗಡಿನಿಂದ ತುಂಬಿದ್ದಾರೆ.

ಕನಕದಾಸರು ಒಬ್ಬ ಶೂದ್ರಕವಿಯಾಗಿ ಮೇಲೆ ಬಂದಿರುವುದರಿಂದ, ಅವರು ಒಳಹೊಕ್ಕಂತಹ ಹೊಸ ಕ್ಷೇತ್ರಗಳಲ್ಲಿ ಹೋರಾಟವೇ ನಡೆಸಬೇಕಾಗಿ ಬಂದಿತು. ಆದ್ದರಿಂದ ಈ ಬಗೆಯ ನಾನಾ ದಂತಕಥೆಗಳಿಗೆ ಬಹುಶಃ ಅವಕಾಶವಾಗಿರಬಹುದು. ಅದಲ್ಲದೆ ಕನಕದಾಸರ ನೈಜಭಕ್ತಿ, ಜ್ಞಾನ ಹಾಗೂ ಕುಶಲ ಮತಿತ್ವಕ್ಕೆ ಹಲವರು ಅಸೂಯೆಪಟ್ಟಿದ್ದು ಇದಕ್ಕೆ ಕಾರಣವಾಗಿರಲೂಬಹುದು. ಆದರೆ ಕನಕದಾಸರು ಈ ಎಲ್ಲಕ್ಕೂ ಕಿವಿಗೊಟ್ಟರೂ, ಮನಗೊಡದೆ ತಮ್ಮ "ಕೀರ್ತನೆ"ಗಳ ಮೂಲಕವೇ ಸರಿಯಾಗಿ ಉತ್ತರಿಸಿ ಅವನ್ನೆಲ್ಲಾ ತಣ್ಣಗಾಗಿಸಿದ್ದು ಅವರ ಅದ್ಭುತ ಪ್ರತಿಭೆಗೆ ಸಾಕ್ಷಿ. ಕನಕದಾಸರ ಕೀರ್ತನೆಗಳಲ್ಲಿ ಕಂಡು ಬರುವ ತೀಕ್ಷ್ಣವಾದ ಅಭಿವ್ಯಕ್ತಿಗೆ ಅವರು ಎದುರಿಸಿದ ಘಟನೆಗಳೇ ಕಾರಣವೆನ್ನಬಹುದು. ಆದರೆ ಉಳಿದ ಕೀರ್ತನಕಾರರಿಗಾಗಲೀ, ಉಳಿದ ಕವಿಗಳಿಗಾಗಲೀ ಇಂತಹ ಸಂದಿಗ್ಧ ಪರಿಸ್ಥಿತಿ ಇದ್ದುದು ಕಂಡುಬರುವುದಿಲ್ಲ.[೨]

ಸಮಾಜಮುಖಿಯಾದ ಕನಕದಾಸರ ಸಮಾಜಪ್ರಜ್ಞೆ ದೀನದಲಿತರತ್ತ ಹೊರಳಿ ಮೇಲ್ವರ್ಗದವರಿಂದ ಆಗುತ್ತಿರುವ ಅನ್ಯಾಯಗಳನ್ನು ಸಹಿಸದೆ ಮತ–ಧರ್ಮಗಳ ಕವಚದಿಂದ ಹೊರಬಂದು ಅನ್ಯಾಯ, ಅಧರ್ಮ, ಡಂಭಾಚಾರ, ಮೂಢನಂಬಿಕೆಗಳನ್ನು ಪ್ರತಿಭಟಿಸಿ ಕ್ರಾಂತಿಕಹಳೆ ಊದಿದ ಕ್ರಾಂತಿವೀರ ದಾಸರಾಗಿದ್ದಾರೆ.

ಸಾಮಾಜಿಕವಾಗಿ ಸಮಾಜದಲ್ಲಿ ಆಳವಾಗಿ ಬೇರು ಬಿಟ್ಟಿದ್ದ ಕೆಲವೊಂದು ಕಂದಾಚಾರಗಳನ್ನು, ಅಸಮತೆಯನ್ನು, ಮೂಢನಂಬಿಕೆಗಳನ್ನೆಲ್ಲಾ ಕಿತ್ತೊಗೆಯಲು ಧರ್ಮದ ಮುಖಂಡರಾಗಿ ಬಸವಣ್ಣನವರು ಮತ್ತೆ ಅಂತಹ ಕೆಲವರು ಆಡಿದ ಮಾತುಗಳನ್ನು ಬಿಟ್ಟರೆ, ಉಳಿದವರಲ್ಲಿ ಅಂತಹ ಮಾತುಗಳು ಕೇಳಿಬರುವುದಿಲ್ಲ. ಕನಕದಾಸರಂತೆ ಅಲ್ಲಿ ಯಾವೊಬ್ಬ ಶರಣನೂ ತನ್ನ ಅಸ್ತಿತ್ವಕ್ಕಾಗಿ ಹೋರಾಟ ನಡೆಸಬೇಕಾದ ಸನ್ನಿವೇಶವೇ ಬರುವುದಿಲ್ಲ. ಕನಕದಾಸರ ಸಾಹಿತ್ಯದ ಕೊಡುಗೆಯಲ್ಲಿ ಕಂಡುಬರುವ ವೈಶಿಷ್ಟ್ಯಕ್ಕೆ ಇದೂ ಒಂದು ಕಾರಣವಾಗಿದೆ.[೩] ಕನಕದಾಸರು ಮಧ್ವಮತಸಿದ್ಧಾಂತಗಳಿಂದ ಆಕರ್ಷಿತರಾಗಿರುತ್ತಾರೆ. ನಿಜವಾದ ಭಕ್ತನಿಗೆ ಯಾವ ವರ್ಣಾಶ್ರಮ, ಕಟ್ಟುಪಾಡುಗಳೂ ಬೇಡವೆಂದು ಅವರು ತಮ್ಮ ಕೀರ್ತನೆಗಳಲ್ಲಿ ಘಂಟಾಘೋಷವಾಗಿ ಹೇಳಿದ್ದಾರೆ. ತತ್ವಜ್ಞಾನ ಮತ್ತು ಭಕ್ತಿಮಾರ್ಗವನ್ನು ಸಮಾಜದ ಕೆಳಸ್ತರದ ಜನರಿಗೆ ಸುಲಭವಾಗಿ ಅರ್ಥವಾಗುವ ಸರಳ, ತಿಳಿಯಾದ ಆಡುಭಾಷೆಯಲ್ಲಿಯೇ ತಿಳಿಸಿ ಶೂದ್ರರಲ್ಲಿಯೂ ಭಕ್ತಿಪ್ರಜ್ಞೆಯನ್ನುಂಟುಮಾಡಿದ ದಾಸಶ್ರೇಷ್ಠ ಕನಕದಾಸರು. ಕನಕದಾಸರು ಹುಟ್ಟಿನಿಂದ ಶೂದ್ರರಾದರೂ; ನಿಷ್ಠೆಯಿಂದ ಬ್ರಾಹ್ಮಣರು. ಇವರದು ಬಹುಮುಖ ಪ್ರತಿಭೆ. ಹಾಗಾಗಿ ಇವರು ಮಹಕವಿಗಳಾಗಿ, ಮಹಾಸಂತರಾಗಿ, ಮಹಾನುಭಾವಿಗಳಾಗಿ, ಸಮಾಜ ಸುಧಾರಣಾ ಪವಾಡ ಪುರುಷರೆನಿಸಿ, ಹರಿಭಕ್ತ- ಹರಿದಾಸರಾದರೂ; ಸಮಾಜದ ಮುಂದೆ "ಕುಲವಿಲ್ಲದ ದಾಸ ಕುರುಬದಾಸ"ರಾಗಿ ನಿಲ್ಲುತ್ತಾರೆ.

ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಹೀಗೆ ಕನಕದಾಸರು ಪುನರ್‌ರಚನೆಗೆ ಕಾರಣರಾಗುತ್ತಾರೆ ಎಂದರೆ; ಅವರಲ್ಲಿ ಬೆಳೆಯುತ್ತಿರುವ ಘರ್ಷಣೆಗಳಿವೆ ಎಂದರ್ಥ.[೪] ಶ್ರೀವೈಷ್ಣವ ಮತದ ಆಚಾರ-ವಿಚಾರಗಳನ್ನು ಆನುಷ್ಠಾನಗೊಳಿಸುವ ಮಠದ ಅನುಯಾಯಿಗಳ ವರ್ತನೆಯಿಂದ ಬೇಸತ್ತು ಕನಕದಾಸರು ಶ್ರೀವ್ಯಾಸರಾಜರಲ್ಲಿಗೆ ಬರುತ್ತಾರೆ. ಕನಕದಾಸರು ಯತಿಗಳ ಬಗ್ಗೆ ತಿಳಿದಿರುತ್ತಾರೆ. ವ್ಯಾಸರಾಯರಿಗೂ ಕನಕದಾಸರ ವಿಷಯ ತಿಳಿದಿರುತ್ತದೆ. ಅವರೂ ಕೆಲವು ಪರೀಕ್ಷೆಗಳನ್ನೊಡ್ಡುವುದರ ಮೂಲಕ ದೃಢಪಡಿಸಿಕೊಳ್ಳುತ್ತಾರೆ.

ದೈವವಿರುದ್ಧ, ಕರ್ಮವಿರುದ್ಧ, ತಾಟಸ್ಥ್ಯದ ವಿರುದ್ಧ, ಜಾತಿವಿರುದ್ಧ, ವರ್ಗವಿರುದ್ಧ, ಹಿಂಸೆ ಅಥವಾ ನೋವು ವಿರುದ್ಧವಾದ ಚಟುವಟಿಕೆಯನ್ನು ನಾವಿಂದು "ಬಂಡಾಯದ್ರವ್ಯ" ಎಂದು ಗುರ್ತಿಸಿಕೊಂಡಿದ್ದೇವೆ.[೫]. ಆದರೆ ಕನಕದಾಸರ ಕೀರ್ತನೆಗಳಲ್ಲಿ ಅಂದಿನ ಕಾಲಕ್ಕೇ ಈ ಬಂಡಾಯದ ದನಿ ಎದ್ದಿರುವುದನ್ನು ನಾವು ಕಾಣುತ್ತೇವೆ. ವ್ಯಾಸರಾಯರು ಕನಕದಾಸರನ್ನು ತಮ್ಮ ಪ್ರಿಯಶಿಷ್ಯವರ್ಗಕ್ಕೆ ಸೇರಿಸಿಕೊಂಡು "ಅಂಕಿತ" ಕೊಡಲು ಮುಂದಾದಾಗ ಮಠದ ಪಂಡಿತರು-ಶಿಷ್ಯರುಗಳಿಂದ ತೀವ್ರ ವಿರೋಧ ವ್ಯಕ್ತವಾಗಿರುವುದನ್ನು ಕಂಡು ಮನನೊಂದ ಯತಿಗಳು ;

ನಾಡಾಡಿಯಂತೆಯೇ ಮಾಡಿ ಬಿಟ್ಟಿರಿ ಇವಗೆ ।
ನಾಡೆಲ್ಲಾ ಹುಡುಕಿದರೂ ಈಡಾರ ಕಾಣೆ ॥[೬]

ಎಂದು ಹೇಳಿರುವ ಮಾತು ಅರ್ಥಗರ್ಭಿತವಾಗಿದೆ. ತಮ್ಮ ಗುರುಗಳು ಹೇಳಿದ ಈ ಮಾತನ್ನು ಪುಷ್ಟೀಕರಿಸಲೆಂದೇ ಕನಕದಾಸರು ವಿರೋಧಿಗಳಿಗೆಲ್ಲ "ಮುಂಡಿಗೆ"ಗಳ ಸವಾಲೆಸಿದಿದ್ದಾರೆ.

ಕನ್ನಡದ ಮಂದಿ ಮೆಚ್ಚಿದ ಕವಿಗಳು ನಮ್ಮ ಈ ಕನಕದಾಸರು ! "ಕನಕದಾಸರು ದಾಸರಲ್ಲಿ ಕವಿಗಳು" ಎನ್ನುವ ಮಾತು ಅವರ ಸಾಧನೆಗೆ, ವೈಯಕ್ತಿಕ ಪ್ರತಿಭೆಗೆ ಹಿಡಿದ ಕನ್ನಡಿ. ಸಮಾಜದ ಕೆಳಸ್ತರದಿಂದ ಬಂದು

ಸಾಮಾಜಿಕ ಕಟ್ಟುಪಾಡುಗಳನ್ನು ಮುರಿದುಕಟ್ಟಿದ ಧೀಮಂತರು ಕನಕದಾಸರು. ಇದರಿಂದಾಗಿಯೇ ಅವರ ಸಾಮಾಜಿಕ ವಿಡಂಬನೆಯಲ್ಲಿ ಹೆಚ್ಚಿನ ನೋವೂ, ತೀಕ್ಷ್ಣತೆಯೂ ನೆಗೆದು ಕಾಣುತ್ತಿರುವುದು. ಅವರು ತಮ್ಮ ಕೀರ್ತನೆಗಳಲ್ಲಿ ಜಡಕರ್ಮಕಾಂಡಗಳ ವಿವರಗಳಿಗೆ, ಮತತತ್ವ ಪ್ರತಿಪಾದನೆಗೆ ವಿಶೇಷ ಇಂಬು ನೀಡಿಲ್ಲ. ಅಲ್ಲಿ "ಅಪರೋಕ್ಷ ಜ್ಞಾನಿ"ಯೊಬ್ಬನ ಏಕಾಂತ ಭಕ್ತಿಯನ್ನೂ ಸರ್ವಾರ್ಪಣ ಮನೋಧರ್ಮವನ್ನೂ ಕಾಣಬಹುದಾಗಿದೆ. ಜನತೆಯ ಮೌಢ್ಯ, ಅಂಧಕಂದಾಚಾರ, ವರ್ಣವ್ಯವಸ್ಥೆಯ ಕ್ರೂರತನಗಳನ್ನು ತಮ್ಮ ಕೀರ್ತನೆಗಳಲ್ಲಿ "ಗಾಳಿಗೆ ಹಿಡಿ"ದಿದ್ದಾರೆ. "ತನು ನಿನ್ನದು ಜೀವನ ನಿನ್ನದು", "ತಲ್ಲಣಿಸದಿರು ಕಂಡ್ಯ ತಾಳು ಮನವೆ", "ತೊರೆದು ಜೀವಿಸಬಹುದೆ ಹರಿ ನಿನ್ನ ಕಮಲಗಳ", "ಬಾಗಿಲನು ತೆರೆದು ಸೇವೆಯನು ಕೊಡು ಹರಿಯೇ", "ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು"– ಕೀರ್ತನೆಗಳಲ್ಲಿ ಅವರ ಪ್ರವೃತ್ತಿ ಮನೋಧರ್ಮವನ್ನು ಸಾಧಕನೊಬ್ಬನ ಮೊರೆಯನ್ನು ಗುರುತಿಸಬಹುದು. "ಕುಲ ಕುಲವೆನ್ನುತಿಹರು", "ಖಣಿಯ ಹೇಳಬಂದೆ", "ಎಲ್ಲರೂ ಮಾಡುವುದು ಹೊಟ್ಟೆಗಾಗಿ"–ಮೊದಲಾದ ಕೀರ್ತನೆಗಳಲ್ಲಿ ಅವರ ಸಾಮಾಜಿಕ ವಿಡಂಬನೆಯ ಧಾಟಿಯನ್ನು ಗುರ್ತಿಸುತ್ತೇವೆ. ಕನಕರು ಕೀರ್ತನೆಗಳಲ್ಲಿ ಸಮಕಾಲದ ಆಡುಮಾತುಗಳನ್ನು ಬಳಸಿರುವುದು "ದಾಸಸಾಹಿತ್ಯ"ದಲ್ಲೇ ಒಂದು ವಿಶಿಷ್ಟ ಮಾದರಿ. [೭]

"ದಾಸಸಾಹಿತ್ಯ" ಪರಂಪರೆಯಲ್ಲಿ "ಕನಕದಾಸರದ್ದು ವಿಶಿಷ್ಟ ಸ್ಥಾನ" ಎಂಬುದು ಕೇವಲ ಔಪಚಾರಿಕ ಮಾತಲ್ಲ. ಜೀವನದ ಹರಹು ಹಾಗೂ ಅಭಿವ್ಯಕ್ತಿಯ ಸೊಗಡು ಎರಡರಲ್ಲೂ ಅವರು ಉಳಿದ ಹರಿದಾಸರಿಗಿಂತ ಪ್ರತ್ಯೇಕವಾಗಿ ನಿಲ್ಲುತ್ತಾರೆ. ವೈದಿಕ ಪರಂಪರೆಯ ಸಾಂಪ್ರದಾಯಿಕ, ಧರ್ಮ, ಆಚಾರನಿಷ್ಠವಾದ ಸೀಮಿತ ಅನುಭವಕ್ಕಿಂತ ಈತನ ಅನುಭವ ಆಳದಲ್ಲಿಯೂ, ಅಗಲದಲ್ಲಿಯೂ ರೋಮಾಂಚನವಾಗಿರಬೇಕು. ಬದುಕಿನ ಭವಣೆಗಳೊಂದಿಗೆ ರೋಷ–ಅಪಮಾನದಂತಹ ಉತ್ಕಟ ಭಾವಾವೇಶಗಳು ತಳುಕು ಹಾಕಿಕೊಂಡಿರಲೇಬೇಕು. ಕನಕನ ವೈರಾಗ್ಯ–ದೈವಶ್ರದ್ಧೆಗಳು ಪುಸ್ತಕವ್ಯಾಸಂಗ ಪ್ರವಚನಗಳಿಂದ ಬಂದುದಾಗಿರದೆ ತೀವ್ರವಾದ ಜೀವನಾನುಭವದ ಸಹಜ ಪರಿಪಕ್ವ ಫಲವಾಗಿರಬೇಕು. ಪರಿಣಾಮವಾಗಿ ಜಾತಿಮತಗಳಿಂದ ಮಾನವಹೃದಯದಲ್ಲಿ ಮೂಡಿದ ಬಿರುಕುಗಳ ಬಗ್ಗೆ ಉತ್ಕಟವಾದ ಅಸಹನೆ ಆತನ ಕೃತಿಯಲ್ಲಿ ಹೊರಹೊಮ್ಮಿವೆ.[೮] ಕನಕದಾಸರಂತಹ ಜಾಣರಿಂದ ನಿರ್ಮಿತವಾದ ಒಂದು ಹಾಡು ಹತ್ತಾರು ಜನರ ಭಾವಕೋಶಗಳಲ್ಲಿ ಪಡಿಯಚ್ಚುಗೊಂಡು ಸಾಮುದಾಯಿಕ ಸೃಷ್ಟಿಯ ಮೂಲಕ ಜನಾಂಗದ ಸೊತ್ತಾಯಿತು. ಅಷ್ಟೇಅಲ್ಲ; "ವಾಚಿಕಸ್ವರೂಪ"ದ ಅವರ ಕೀರ್ತನೆಗಳು ಜನಪದ ಸಾಹಿತ್ಯದ ಒಂದು ಸಾರಲಕ್ಷಣವಾಗಿದೆ.[೯] ಸಾಮಾಜಿಕದೃಷ್ಟಿಯಿಂದ ಕನಕದಾಸರ ಕೀರ್ತನೆಗಳ ಪಾತ್ರ ಕಡಿಮೆಯೂ ಅಲ್ಲ ಕಡೆಗಣಿಸುವಂತಹದೂ ಅಲ್ಲ. ಕನಕದಾಸರ ಕೃತಿಗಳಾದ ಕಾವ್ಯ ಮತ್ತು ಕೀರ್ತನೆಗಳಲ್ಲಿ ಸಾಮಾಜಿಕಪ್ರಜ್ಞೆಯೇ ಮೂಲಭೂತ ಆಶಯವಾಗುತ್ತದೆ. ಶರಣರನ್ನು ಬಿಟ್ಟರೆ ಬಹುಶಃ ನಮ್ಮ ಯಾವ ಕವಿಗಳೂ ಸಾಮಾಜಿಕವಾಗಿ ಅನುಭವಿಸಿದ ಪರಿತಾಪವನ್ನು ಅನುಭವಿಸಿಯೂ ಅದರ ಅಭಿವ್ಯಕ್ತಿಯಲ್ಲಿ ಪ್ರಕಟಿಸಿದ ಸಂಯಮತೆಯೇ ಒಂದು ದೊಡ್ಡ ಆದರ್ಶ.[೧೦]

*** ** ***

## ✣ ✳ ✣ ಅಡಿಟಿಪ್ಪಣಿಗಳು ✣ ✳ ✣

೧. ಡಾ. ಡಿ.ಕೆ. ರಾಜೇಂದ್ರ "ಕಸಾದ" ಸಂ-೧, ಪು.೫೨೭

೨. -- " -- ಅದೇ ಪು.೫೨೮

೩. -- " -- ಅದೇ ಪು.೫೨೯

೪. ಡಾ. ಹಿ.ಶಿ. ರಾಮಚಂದ್ರೇಗೌಡ "ಕಸಾದ" ಸಂ-೧, ಪು.೬೪೭

೫. -- " -- ಅದೇ ಪು.೬೬೩

೬. ಪ್ರೊ|| ಸುಧಾಕರ(ಸಂ) ಕನಕದಾಸರ ಕೀರ್ತನೆಗಳು ಭಾ-೧, "ಸದಾಸಾ",ಸಂ-೫, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ

೭. ಪ್ರೊ. ಎ.ವಿ. ನಾವಡ, "ದಾಸಮಾರ್ಗ", ಪ್ರಕಾಶಕರು: "ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ, ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ.-೨೦೦೪, ಪು.೧೦

೮. ಡಾ. ಎಸ್. ವೇಣುಗೋಪಾಲದಾಸ್, "ಕನಕ ಸಾಹಿತ್ಯ ದರ್ಶನ" ಸಂ-೧, ಪು.೨೪೨

೯. ಪ್ರೊ. ಎ.ವಿ. ನಾವಡ, "ದಾಸಮಾರ್ಗ", ಪ್ರಕಾಶಕರು: "ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ, ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ.-೨೦೦೪, ಪು.೩೨

೧೦. ಡಾ. ಎಸ್.ಎಸ್. ಕೋತಿನ, "ಕಸಾದ" ಸಂ-೧, ಪು.೬೮೪

✳✳✳ ✶✶ ✳✳✳

## ಅ) ಹಿನ್ನೆಲೆ

ಮಧ್ಯಕಾಲೀನ ಭಾರತದ ಧಾರ್ಮಿಕ ಇತಿಹಾಸವನ್ನು ಸಾಮಾಜಿಕ ಚರಿತ್ರೆಯಾಗಿ ಮತ್ತು ಸಾಮಾಜಿಕ ಇತಿಹಾಸವನ್ನು ಧಾರ್ಮಿಕ ಚರಿತ್ರೆಯಾಗಿಯೂ ಪರಿಕಲ್ಪಿಸಬಹುದಾಗಿದೆ. ಮಧ್ಯಕಾಲೀನ ಭಾರತದ ಇತಿಹಾಸವೆಂದರೆ ಭಕ್ತಿಪಂಥದ, ಅನುಭಾವಿ ಸಂತರ ಪರಂಪರೆಯ ಇತಿಹಾಸವೇ ಆಗಿದೆ. ಯಾವುದೇ ಒಂದು ಧಾರ್ಮಿಕ ಆಂದೋಲನ ಅಥವಾ ಸಮಾಜ ಚಳವಳಿ ಹುಟ್ಟಲು ಆ ಪರಿಸರವೇ ಮುಖ್ಯ ಕಾರಣವಾಗಿರುತ್ತದೆ. ಮಧ್ಯಕಾಲೀನ ಭಾರತದಲ್ಲಿನ ರಾಜಕೀಯ ವಿಪ್ಲವ, ಧಾರ್ಮಿಕ ಸಂಘರ್ಷಗಳು, ಸಾಮಾಜಿಕ ಅರಾಜಕತೆಗಳ ಇಕ್ಕಟ್ಟಿನಲ್ಲಿ "ಭಕ್ತಿಪಂಥ" ಒಂದು ಚಳವಳಿಯ ಸ್ವರೂಪವನ್ನೇ ಬಹುತೇಕ ಭಾರತದಾದ್ಯಂತ ವ್ಯಾಪಿಸಿತು. ಕ್ರಿ.ಶ.೧೨ನೇ ಶತಮಾನದ ಶಿವಶರಣರ "ಹರಭಕ್ತಿ" ಹಾಗೂ ಕ್ರಿ.ಶ. ೧೫ನೇ ಶತಮಾನದಲ್ಲಿ ಆರಂಭವಾದ ಹರಿದಾಸರ "ಹರಿಭಕ್ತಿ" ಚಳವಳಿಗಳು ತತ್ತ್ವಶಾಸ್ತ್ರದ ಕಗ್ಗಂಟಿನಲ್ಲಿ ಬಿಗಿದಿದ್ದ ಧಾರ್ಮಿಕ ಅನುಷ್ಠಾನಕ್ಕೆ "ಭಕ್ತಿ"ಯ ಅನುಸಂಧಾನದ ಮೂಲಕ ಹೊಸ ಚಾಲನೆಯನ್ನೇ ನೀಡಿ, ಆಧ್ಯಾತ್ಮಿಕತೆಗೆ ಹೊಸ ಪರಿಭಾಷೆಯನ್ನೇ ಕಟ್ಟಿದರು.[೧] ಹೀಗಾಗಿ "ಭಕ್ತಿ" ಎಂಬುದೇ ವಾಸ್ತವವಾಗಿ ಒಂದು ಸ್ವ-ರಸವಾಹಿಯಾದ ಭಾವ. ಇದು ಭಾವವೂ ಹೌದು. ರಸವೂ ಹೌದು. ಏಕೆಂದರೆ ನಿಸರ್ಗದ ಸೌಂದರ್ಯವನ್ನು ಕುರಿತ ವಿಸ್ಮಯ, ಭಯಾನಕತೆಯನ್ನು ಕುರಿತ ಭೀತಿ ಹಾಗೂ ಪ್ರಕೃತಿ ನೀಡಿದ ಸವಲತ್ತುಗಳನ್ನು ಕುರಿತ ಕೃತಜ್ಞತೆ- ಈ ಎಲ್ಲಾ ಭಾವಗಳ ಸಂಕೀರ್ಣ ರೂಪವಾಗಿ "ಭಕ್ತಿ" ಹುಟ್ಟಿಕೊಂಡಿದೆ. ಭಕ್ತಿಯ ಹೊಟ್ಟೆಯಲ್ಲೇ ದೇವರೂ ಅವತರಿಸಿದ. ಆದ್ದರಿಂದಲೇ ಭಕ್ತಿಯ ಉಗಮದ ಬಗೆಗೆ ಚಿಂತಿಸುವಾಗ ಇದರ ಹುಟ್ಟು, ಬೆಳವಣಿಗೆಗಳ ಬಗೆಗೆ ಈವರೆವಿಗೂ ಒಮ್ಮತ ಮೂಡಿಲ್ಲ.[೨] ಆದರೆ ಭಕ್ತರಾದವರು ಹರಭಕ್ತರೇ ಆಗಲಿ, ಹರಿಭಕ್ತರೇ ಆಗಲಿ ಅಥವಾ ಆಳ್ವಾರರಾಗಲಿ, ರಾಮದಾಸಿಗಳೇ ಆಗಲಿ ಪಂಥಗಳು ಭಿನ್ನವಾದರೂ; ಅಂತರಂಗದ ತಿರುಳು ಮಾತ್ರ ಒಂದೇ ಎಂಬುದನ್ನು ನಾವು ಮರೆಯುವಂತಿಲ್ಲ. ಆಂದರೆ ಭಕ್ತಿಲೋಕದಲ್ಲಿ "ಗಂಡು-ಹೆಣ್ಣಿ"ನ ಭೇದವಿಲ್ಲ. "ಆಳು-ಅರಸ" ಎಂಬ ಅಂತರವಿಲ್ಲ. ಆದ್ದರಿಂದ ಭಕ್ತಿಯಲೋಕ ಒಂದು ವಿಶಿಷ್ಟ ಸಮಾನತೆಯ ಲೋಕ. ಅಷ್ಟೇ ಅಲ್ಲದೆ; ಕಾಶ್ಮೀರದ ಲಲ್ಲ, ತಮಿಳುನಾಡಿನ ಆಂಡಾಳ್, ಕರ್ನಾಟಕದ ಅಕ್ಕಮಹಾದೇವಿ, ಉತ್ತರಭಾರತದ ಮೀರ- ದೇವರನ್ನೇ ಗಂಡನಾಗಿ ಮಾಡಿ-ಕೊಂಡು ಕೃತಿ ರಚಿಸಿ, ಹಾಡಿದ ಕವಿಯತ್ರಿಯರ ಕೃತಿಗಳನ್ನು ಗಮನಿಸಿದರೆ; ಅಂದಿನ ಕಾಲದ

ಸಮಗ್ರ ಭಾರತದ ಸಾಮಾಜಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಚಿತ್ರಣಗಳು ನಮಗೆ ಸಿಗುತ್ತವೆ. ಅಂತೆಯೇ ಈ ಹಿನ್ನೆಲೆಯಲ್ಲಿ ನಾವು ದಾಸಸಾಹಿತ್ಯದ ಪರಂಪರೆಯನ್ನು ಗಮನಿಸುವಾಗ ನಮಗೆ ಅದು "ವಚನಸಾಹಿತ್ಯ" ಅಥವಾ "ಶರಣರಸಾಹಿತ್ಯ"ದಿಂದ ಸ್ಫೂರ್ತಿ ಪಡೆದಿರುವುದನ್ನು ಕಾಣುತ್ತೇವೆ.[೩]

ಭಾರತೀಯ ಆಧ್ಯಾತ್ಮಿಕ ಇತಿಹಾಸದಲ್ಲಿ ಕರ್ನಾಟಕದ ಪಾತ್ರ ಬಹಳ ವಿಶಿಷ್ಟವಾದುದು. ವೈದಿಕ ಧರ್ಮದ ಪುನರುತ್ಥಾನಕ್ಕೆ ತ್ರಿಮತಾಚಾರ್ಯರೂ ಪಣತೊಟ್ಟು ನಿಂತರು. ಉತ್ತರಭಾರತದಲ್ಲಿ ಹುಟ್ಟಿ, ಹರಿದ ವೈದಿಕ ಧರ್ಮಪ್ರವಾಹವನ್ನು ಅಡ್ಡಕಟ್ಟಿ, ಅದರ ಅಸ್ತಿತ್ವವನ್ನೇ ಕಿತ್ತೊಗೆಯಲು ಪ್ರಯತ್ನಿಸಿದ ನಾಸ್ತಿಕ ಮತಗಳು ಹಲವಾರು. ಕರ್ನಾಟಕದಲ್ಲಿ ಒಂದು ಕಾಲಕ್ಕೆ ಬೌದ್ಧಮತವು ಸರ್ವವ್ಯಾಪಿಯಾಗಿ ನೆಲೆಸಿತ್ತು.[೪] ಎಂಬ ಸಂಗತಿ ಇತ್ತೀಚಿನ ಸಂಶೋಧನೆಗಳಿಂದ ತಿಳಿದುಬರುತ್ತಿದೆ. ಜೈನಮತವಂತೂ ಇಂದಿಗೂ ಕೂಡಾ ಇಲ್ಲಿನ ಜನಾಶ್ರಯ, ರಾಜಾಶ್ರಯಗಳನ್ನು ಪಡೆದುದನ್ನು ವಿರಾಜಿಸುತ್ತಿದೆ. ಬೌದ್ಧರೂ, ಜೈನರೂ ಪ್ರಾಕೃತ, ಪಾಳಿ ಭಾಷೆಗಳನ್ನು ತಮ್ಮ ಮೂಲ ಮಾಧ್ಯಮವನ್ನಾಗಿ ಮಾಡಿಕೊಂಡರೆ; ವೈದಿಕ ಮತಾವಲಂಬಿಗಳು ತಮ್ಮ ಗ್ರಂಥಗಳಲ್ಲಿರುವ ಜ್ಞಾನ, ಕರ್ಮಗಳಿಗೆ ಕೊಟ್ಟಿದ್ದ ಪ್ರಾಶಸ್ತ್ಯವೇ ಅತ್ಯಂತ ಹಿರಿದಾಗಿ ಕಾಣಿಸುತ್ತವೆ. ಒಟ್ಟಾರೆ, ವೇದೋಪನಿಷತ್ತುಗಳ ಕಾಲದಿಂದಲೂ ಹರಿದು ಬಂದ ಭಕ್ತಿಯನ್ನೇ ಪ್ರಧಾನ ಸೂತ್ರವಾಗಿ ಅಂಗೀಕರಿಸಿ ಭಕ್ತಿಪಂಥಗಳನ್ನು ಸ್ಥಾಪಿಸಿದ ಕೀರ್ತಿ ದಕ್ಷಿಣ ಭಾರತೀಯರಿಗೆ ಸಲ್ಲುತ್ತದೆ.[೫]

ಕ್ರಿ.ಶ. ೧೦ನೇ ಶತಮಾನದಲ್ಲಿ ತಮಿಳುನಾಡಿನಲ್ಲಿ ನಾಯನ್ಮಾರರು, ಆಳ್ವಾರರು, ಶೈವ-ವೈಷ್ಣವ ಭಕ್ತರಾಗಿದ್ದು; ಜಾತಿ, ಮತ, ಕುಲ, ಗೋತ್ರ-ಲಿಂಗಭೇದಗಳಾವುದನ್ನು ಲೆಕ್ಕಿಸದೇ ಭಕ್ತಿಗೆ ಅಗ್ರಸ್ಥಾನ ಕಲ್ಪಿಸಿಕೊಟ್ಟಿದ್ದರು. ಶ್ರೀರಾಮಾನುಜರ ವಿಶಿಷ್ಟಾದ್ವೈತ ತತ್ತ್ವಕ್ಕೆ ತಮಿಳುನಾಡಿನ ಆಳ್ವಾರರ ಪ್ರಬಂಧಗಳೇ ಸ್ಫೂರ್ತಿ. ಹೀಗೆ ಭಕ್ತಿಪಂಥದ ಉಗಮ ಬೆಳವಣಿಗೆಗಳು ೧೦ನೇ ಶತಮಾನದಲ್ಲಿ ರೂಪುಗೊಂಡು ೧೫ನೇ ಶತಮಾನದ ಕಾಲಕ್ಕೆ ಪುಷ್ಟಿಗೊಂಡಿರುವುದನ್ನು ಕಾಣುತ್ತೇವೆ.

ಕ್ರಿ.ಶ. ೧೨ನೇ ಶತಮಾನದ ವೇಳೆಗೆ ಕರ್ನಾಟಕದಲ್ಲಿ ರೂಪತಾಳಿದ ವೀರಶೈವರು ಕನ್ನಡದ ಮೂಲಕ ತಮ್ಮ ಮತ ತತ್ತ್ವ ಪ್ರಚಾರಕ್ಕೆ ತೊಡಗಿದರು. ವೀರಶೈವ ಭಕ್ತಿಪಂಥಕ್ಕೆ ಅದ್ವೈತ ತತ್ತ್ವ ತಳಹದಿಯಾದಂತೆಯೇ ಹರಿದಾಸರ ಭಕ್ತಿ ಪ್ರತಿಪಾದನೆಗೆ ಶ್ರೀಮಧ್ವಾಚಾರ್ಯರ ದ್ವೈತ ಸಿದ್ಧಾಂತವೇ ಪ್ರಮುಖವಾದ ಅಡಿಗಲ್ಲಾಗಿದೆ. ಇದಕ್ಕೆ ಪ್ರಮುಖ ಕಾರಣವೆಂದರೆ; ಮಧ್ವಾಚಾರ್ಯರು ತಮ್ಮ ದ್ವೈತ ಸಿದ್ಧಾಂತದಲ್ಲಿ ಹೇಳಿರುವ "ಈಶ-ದಾಸ" ಭಾವಕ್ಕೇ ಅವರು ಅಗ್ರಸ್ಥಾನ ಕೊಟ್ಟಿರುವುದೇ ಆಗಿದೆ. ಅಂದರೆ; ಸರ್ವಾಂತರ್ಯಾಮಿಯಾದ ಶ್ರೀಹರಿಯ ಆರಾಧನೆಯನ್ನೂ ಮತ್ತು ಭಗವದ್ಭಕ್ತಿಯ ದ್ಯೋತಕವಾಗಿ ಹರಿದಾಸ್ಯದ ಅಗ್ಗಳಿಕೆಯನ್ನೂ ಸ್ಪಷ್ಟವಾಗಿ ನೀಡಿದ್ದಾರೆ. ಅಂತೆಯೇ, ಕನ್ನಡ ಹರಿದಾಸರುಗಳ ರಚನೆಯಲ್ಲಿ ವೇದೋಪನಿಷತ್ತುಗಳು ಮತ್ತು ಇತರ ಆಧ್ಯಾತ್ಮಿಕ ಗ್ರಂಥಗಳಲ್ಲಿ ಹುದುಗಿರುವ ಪ್ರಮುಖಾಂಶಗಳೆಲ್ಲವೂ ಅಡಕವಾಗಿವೆ.

ಇದಿಷ್ಟೂ ಮಧ್ಯಮಕಾಲೀನ ಭಾರತದ ಧಾರ್ಮಿಕ, ಸಾಹಿತ್ಯ, ಸಂಸ್ಕೃತಿಗಳ ಇತಿಹಾಸ ಮತ್ತು ಪರಂಪರೆಗಳ ಬಗೆಗಿನ ಮಾಹಿತಿಯಾಗಿದ್ದರೆ; ಇನ್ನು ಅಂದಿನ ಕಾಲದ ಸಮಕಾಲೀನ ಕರ್ನಾಟಕದ ಇತಿಹಾಸವನ್ನೊಮ್ಮೆ ಗಮನಿಸಿದಾಗ ಅಲ್ಲಿ ನಮಗೆ ಸಾಹಿತ್ಯವೇ ಪ್ರಮುಖ ಭಾಗವಾಗಿ ಕಾಣಿಸುತ್ತದೆ.

ಮಧ್ಯಮಕಾಲೀನ ಕನ್ನಡ ಸಾಹಿತ್ಯ ಘಟ್ಟದಲ್ಲಿ ಪ್ರಮುಖವಾಗಿ ಕ್ರಿ.ಶ. ೧೨ನೇ ಶತಮಾನವು "ವಚನಸಾಹಿತ್ಯಯುಗ" ಎನಿಸಿಕೊಂಡರೆ; ಕ್ರಿ.ಶ. ೧೫ನೇ ಶತಮಾನವು "ಭಕ್ತಿಯುಗ" ಎಂಬ ಹೆಸರನ್ನು ಪಡೆದುಕೊಂಡಿದೆ. ಮತ್ತು ಇದರು "ದಾಸಸಾಹಿತ್ಯಯುಗ" ಎಂಬ ಹೆಸರಿನಿಂದಲೂ ಗುರ್ತಿಸಲ್ಪಟ್ಟಿದೆ. ಒಟ್ಟಾರೆ, ಈ ಎರಡೂ ಸಾಹಿತ್ಯ ಕಾಲಘಟ್ಟಗಳು ಕನ್ನಡ ಸಾಹಿತ್ಯ ಪರಂಪರೆಯಲ್ಲೇ ಸುವರ್ಣ ಆಧ್ಯಾಯಗಳನ್ನೇ ಸೃಷ್ಟಿಸಿವೆ. ರಾಜಕೀಯವಾಗಿ, ಧಾರ್ಮಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಕನ್ನಡಿಗರ ಜೀವನ ಅನೇಕ ಸಂಕಷ್ಟಗಳಿಗೆ ತುತ್ತಾದಾಗ; ಅನೇಕ ಜೀವನ ತತ್ತ್ವಗಳನ್ನು, ಹಲವಾರು ಆದರ್ಶ ವಿಚಾರಗಳನ್ನು ಜನರಿಗೆ ತಿಳಿಯುವಂತೆ ಶಿವಶರಣರು ಕ್ರಾಂತಿಕಾರಕವಾಗಿ ಬೋಧಿಸಿದರು. ಇನ್ನು ಸಾಮಾನ್ಯವಾಗಿ ಹರಿದಾಸರೆಂದರೆ ಮೊಟ್ಟಮೊದಲ ಬಾರಿಗೆ ನಮಗೆ ನೆನಪಾಗುವವರೆಂದರೆ; ಪುರಂದರದಾಸರು ಮತ್ತು ಕನಕದಾಸರು. ವಿಜಯನಗರದ ಶ್ರೀಕೃಷ್ಣದೇವರಾಯನ ಕಾಲದಲ್ಲಿ ದಾಸಸಾಹಿತ್ಯವನ್ನು ಶ್ರೀಮಂತಗೊಳಿಸಿದ ಈ ಇಬ್ಬರೂ ದಾಸವರೇಣ್ಯರು ನೂರಾರು, ಸಾವಿರಾರು ಕೀರ್ತನೆಗಳನ್ನು ರಚಿಸಿ, ಹರಿದಾಸಸಾಹಿತ್ಯ ಮತ್ತು ಸಾಮಾಜಿಕ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಒಂದು ಆಂದೋಲನ ಸ್ವರೂಪವನ್ನು ಕಲ್ಪಿಸಿದರು.[೬] ಕನಕದಾಸರು ಪುರಂದರದಾಸರ ಸಮಕಾಲೀನರಾಗಿದ್ದು, ಇವರಿಬ್ಬರೂ ದಾಸಕೂಟದ ಉಗಮ ಮತ್ತು ಅದರ ಏಳಿಗೆಗೆ ಮಹಾನ್ ಹರಿಕಾರರಾಗಿದ್ದು; ವ್ಯಾಸಕೂಟದ ಪ್ರಮುಖರಾದ ಶ್ರೀವ್ಯಾಸರಾಜರು ಮತ್ತು ಶ್ರೀವಾದಿರಾಜರಿಗೆ ಬಹಳ ಆತ್ಮೀಯರಾಗಿದ್ದರು. ಪುರಂದರದಾಸರು ಭರತಖಂಡದ ತ್ರಿಮತಾಚಾರ್ಯರಲ್ಲಿ ಕೊನೆಯವರಾದ ಶ್ರೀಮಧ್ವಾಚಾರ್ಯರ ಪರಂಪರೆಗೆ ಸೇರಿದ ಶ್ರೀವ್ಯಾಸರಾಜರಿಂದ ದೀಕ್ಷೆ-ಅಂಕಿತಗಳನ್ನು ಪಡೆದು ಅವರ ಶಿಷ್ಯತ್ವ ವಹಿಸಿದವರಾಗಿದ್ದರೆ; ಕನಕದಾಸರ ಪಾಲಿಗೂ ಶ್ರೀವ್ಯಾಸರಾಜರ ಶ್ರೀಮಠವು ಅತ್ಯಂತ ಪ್ರಮುಖವಾದ ಸ್ಥಳವೇ ಆಗಿದೆ. ಏಕೆಂದರೆ ಅವರು ತಮ್ಮ ಬದುಕಿಗೊಂದು ಮುಖ್ಯವಾದ ತಿರುವನ್ನು ಪಡೆದುಕೊಂಡದ್ದು ಇಲ್ಲಿಯೇ. ಪುರಂದರದಾಸರ ಸಖ್ಯ, ವ್ಯಾಸರಾಜರ ವಾತ್ಸಲ್ಯಗಳು ದೊರೆತದ್ದೂ ಇಲ್ಲಿಯೇ. ಅಂತೆಯೇ, ಅವರಿಗೆ ಕುಲದ ಕಹಿ ಉಣಿಸು ದೊರೆತದ್ದು ಕೂಡಾ ಇಲ್ಲಿಯೇ.[೭]

ಭಕ್ತಿ ಭಂಡಾರಿ ಬಸವಣ್ಣನವರು ಶಿವಶರಣರಾಗಿ ತನ್ನ ಕೂಡಲಸಂಗಮದೇವನನ್ನು,

'॥ ಇವ ಯಾರವ ಇವ ಯಾರವ ಎಂದೆನಿಸದಿರಯ್ಯಾ ।

ಇವನಮ್ಮವ ಇವನಮ್ಮವ ಎಂದೆನಿಸಯ್ಯಾ ॥'

ಎಂದು ಪ್ರಾರ್ಥಿಸಿರುವ ಪರಿ ಇದಾದರೆ; ಭಕ್ತ ಕನಕದಾಸರನ್ನು ಇಂದು ಬೇಡರು, ಕುರುಬರು, ನಾಯಕರು ಮೊದಲಾದವರೆಲ್ಲರೂ "ಇವ ನಮ್ಮವ- ಇವ ನಮ್ಮವ" ಎಂದೇ ಹೊಡೆದಾಡುತ್ತಾ ಅವರ ಮೇಲೆ ತಮ್ಮ ಹಕ್ಕು ಸ್ಥಾಪಿಸಲೆತ್ನಿಸುತ್ತಿದ್ದಾರೆ.[೮]

ಕನಕದಾಸರ ಜಾತಿ, ಕುಲದ ಬಗ್ಗೆ ಪಂಡಿತರಲ್ಲಿ ಈಗಲೂ ಗೊಂದಲವಿದೆ. "ನಾಯಕ" ಎಂಬ ಅಡ್ಡ ಹೆಸರೇ ಅವರು ಬೇಡರ ಜನಾಂಗವರು ಎನ್ನುವ ಊಹೆಗೂ ಮುಖ್ಯ ಕಾರಣ. ಈ ಜನಾಂಗದಲ್ಲಿ "ನಾಯಕ" ಎನ್ನುವ ಪದ ಹೆಸರಿನೊಂದಿಗೆ ಬಳಕೆಯಲ್ಲಿದೆ.[೯] ಏನೇ ಆಗಲಿ ಒಟ್ಟಾರೆ, ಅವರು ತೀರಿಕೊಂಡು ಇಂದಿಗೆ ಸುಮಾರು ಐನೂರು ವರ್ಷಗಳೇ ಕಳೆದಿರಬಹುದು ಆದರೂ ಅವರು ತಮ್ಮವರೆಂದು ಎಲ್ಲರೂ ಅತ್ಯಂತ ವಿಶ್ವಾಸದಿಂದ

ಹೇಳಿಕೊಳ್ಳುತ್ತಿರುವುದೊಂದು ಹೆಮ್ಮೆಯ ವಿಷಯವೇ ಆಗಿದೆ. ಇದು ಕನಕದಾಸರ ಹಿರಿಮೆಗೆತ್ತಿದ ನಂದಾದೀಪವೆಂದೇ ಹೇಳಬಹುದು. ದಾಸಸಾಹಿತ್ಯದಲ್ಲಿ ಕವಿತೆಯ ಸೊಬಗಿನ ಜೊತೆಗೆ ಸಾಮಾಜಿಕ ಕಳಕಳಿಯನ್ನು ವಾಙ್ಮಯ ಸಾಹಿತ್ಯರಂಗವನ್ನು ಶ್ರೀಮಂತಗೊಳಿಸಿದ್ದಾರೆ.[೧೦]

ಇಂತಹ ಸಾರ್ಥಕ ಬದುಕನ್ನು ಸಾಧಿಸಿದ ಭಕ್ತ ಕನಕದಾಸರು ಯಾರು?, ಅವರ ಜೀವನಚರಿತ್ರೆ ಏನು?, ಅವರ ಕಾಲ, ಸ್ಥಳ, ಮತಗಳಾವುದು? ಅವರ ಕಾಲದ ರಾಜಕೀಯ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಆಚರಣೆಗಳು–ಸ್ಥಿತಿಗತಿಗಳು ಹೇಗಿದ್ದವು? ಮತ್ತು ಅವರು ತಮ್ಮ ಕೀರ್ತನೆಗಳ ಮೂಲಕ ಜಗತ್ತಿಗೆ ನೀಡಿರುವ ನೀತಿ ಸಂದೇಶಗಳು, ಸಮಾಜಕ್ಕೆ ನೀಡಿದ ಉಪದೇಶವಾಣಿ ಮೊದಲಾದವುಗಳನ್ನು ಅವರು ರಚಿಸಿರುವ ತಮ್ಮ ಸಮಾಜಮುಖಿ ಕೀರ್ತನೆಗಳ ಮೂಲಕವೇ ತಿಳಿದುಕೊಳ್ಳುವುದೇ ~~ಸನ್ನ~~ ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

*** ** ***

### ✣ ✼ ✣ ಅಡಿಟಿಪ್ಪಣಿಗಳು ✣ ✼ ✣

೧. ಪ್ರೊ॥ ಎ.ವಿ.ನಾವಡ "ದಾಸಮಾರ್ಗ" ಪು.೨
೨. ಪ್ರೊ॥ ಜಿ.ಎಸ್. ಸಿದ್ಧಲಿಂಗಯ್ಯ "ಹರಿದಾಸ ಸಾಹಿತ್ಯ ಪರಂಪರೆ" ಪು.೧
೩. --""-- ಅದೇ ಪು.೨
೪. ಸೀತಾರಾಮ್ ಆರ್. ಜಾಗೀರ್ದಾರ್ "ಬೌದ್ಧಧರ್ಮ" ಪು.೫೧೩, "ಕನ್ನಡ ಸಾಹಿತ್ಯ ಚರಿತ್ರೆ" – ಸಂ–೧, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. ಪ್ರಕಟಣೆ.
೫. ಡಾ. ಜಿ. ವರದರಾಜು "ಹರಿದಾಸ ಸಾಹಿತ್ಯ ಸಾರ" ಪು.೨
೬. ಎಚ್. ಎಸ್. ವೆಂಕಟೇಶಮೂತಿ "ಕೀರ್ತನಕಾರರು" ಪು.೬, ಸಾಮಾನ್ಯನಿಗೆ ಚರಿತ್ರೆ– ಸಂ–೮, ಪು.೬
೭. ಡಾ. ದೇ. ಜವರೇಗೌಡ (ಸಂ) "ಕಸಾದ" ಸಂ–೧, ಪು.೧೬
೮. ಟಿ. ಎನ್. ನಾಗರತ್ನ "ಕನಕದಾಸ" , ಭಾರತೀಯ ಸಾಹಿತ್ಯ ನಿರ್ಮಾಪಕರು, ಸಾಹಿತ್ಯ ಅಕಾಡಮಿಪ್ರಕಟಣೆ, ಪು.೧
೯. ವಿದ್ಯಾವಾಚಸ್ಪತಿ ಶ್ರೀ ಬನ್ನಂಜೆಗೋವಿಂದಾಚಾರ್ಯ "ಕನಕೋಪನಿಷತ್ತು", ಪು.೮
೧೦. --""-- ಅದೇ , ಪು. ೧

*** ** ***

## ಅ) ಜೀವನ ವಿಚಾರ

ಕನಕದಾಸರ ಜೀವನಕ್ಕೆ ಸಂಬಂಧಿಸಿದಂತೆ ಹರಿದಾಸರ ಮನೆತನಗಳಲ್ಲಿ ಉಳಿಸಿಕೊಂಡು ಬಂದಿರುವ ದಾಖಲೆಗಳ ಪ್ರಕಾರ ಮತ್ತು ಸಾಮಾಜಿಕ ಜನಜೀವನದಲ್ಲಿ ಉಳಿಸಿಕೊಂಡು ಬಂದಂತಹ ಕರ್ಣಪರಂಪರೆಯ ಐತಿಹ್ಯದಂತೆ ಹಾಗೂ ಡೊಳ್ಳುಕುಣಿತದ ಹಾಡುಗಳಲ್ಲಿ ನವಗೆ ದೊರೆಯುವ ಮಾಹಿತಿಯ ಆಧಾರಗಳ ಪ್ರಕಾರ ಕನಕದಾಸರ ತಂದೆ ಬೀರಪ್ಪ ಮತ್ತು ತಾಯಿ ಬಚ್ಚಮ್ಮ.[೧]

ಇವರ ನಿರ್ಧಿಷ್ಟ ಕಾಲದ ಬಗೆಗೆ ವಿದ್ವಾಂಸರಲ್ಲಿ ಖಚಿತವಾದ ಏಕಾಭಿಪ್ರಾಯವಿಲ್ಲ. ಆದರೂ ಸರ್ವಮತದ ಪ್ರಕಾರ ಕ್ರಿ.ಶ.೧೪೯೫ರಿಂದ ೧೬೦೬ ಎಂಬ ಕಾಲವನ್ನು ವಾಸ್ತವತೆಗೆ ಹೆಚ್ಚು ಅಧಿಕವಾಗಿರುವಂತೆ ನಿರ್ಧರಿಸಲಾಗಿದೆ.[೨]

ಅಂದಿನ ಕಾಲದ ಕರ್ನಾಟಕದ ಇತಿಹಾಸದಲ್ಲಿ "ಸುವರ್ಣಯುಗ"ವೆಂದು ಗುರ್ತಿಸಲ್ಪಟ್ಟಿರುವ ಶ್ರೀಕೃಷ್ಣದೇವರಾಯನ ಆಳ್ವಿಕೆಯಿತ್ತು. ಆಗಿನ ಕಾಲದಲ್ಲಿ ಇವರ ಹುಟ್ಟೂರಾದ "ಬಾಡ" ಗ್ರಾಮವು ಧಾರವಾಡಕ್ಕೆ ಸೇರಿತ್ತು. ಆದರೆ ಈಗದು ಹಾವೇರಿ ಜಿಲ್ಲೆಗೆ ಸೇರಿದ ಬಂಕಾಪುರ ಸಮೀಪವಿದೆ. "ಕಾಗಿನೆಲೆ" ಕನಕದಾಸರ ತಾಯಿ ಬಚ್ಚಮ್ಮನವರ ತವರೂರಾಗಿದ್ದು; ಇವರ ತಂದೆ ಬೀರಪ್ಪ ವಿಜಯನಗರ ಅರಸರ ಕಾಲದಲ್ಲಿ ದಂಡನಾಯಕನಾಗಿದ್ದನು.

ಒಟ್ಟಾರೆ, ಈ "ಬಾಡ" ಮತ್ತು "ಕಾಗಿನೆಲೆ" ಎರಡೂ ಕ್ಷೇತ್ರಗಳೂ ಆರಂಭಕಾಲದಿಂದಲೂ ಕನಕದಾಸರ ಸಾಧನೆಗೆ ಎಡೆಮಾಡಿಕೊಟ್ಟಂತಹ ಪವಿತ್ರ ಕ್ಷೇತ್ರಗಳಾಗಿವೆ. "ಬಾಡ" ಹನ್ನೆರಡರ ಹಿರಿಯೂರು ಎಂಬ ಖ್ಯಾತಿಗೆ ಶಾಸನಾಧಾರಗಳಿಂದ ಪಡೆದಿದ್ದರೆ; "ಕಾಗಿನೆಲೆ"ಯು ಕ್ರಿ.ಶ. ೧೦ನೇ ಶತಮಾನದಿಂದಲೇ ಸರ್ವತೋಮುಖ ಪ್ರಸಿದ್ಧಿಗೆ ಬಂದ ಪುರವೇ ಆಗಿದೆ.[೩]

ಬೀರಪ್ಪ ಮತ್ತು ಬಚ್ಚಮ್ಮ ದಂಪತಿಗಳಿಗೆ ಬಹುಕಾಲ ಮಕ್ಕಳಿರಲಿಲ್ಲ. ಆಗ ತಿರುಪತಿ ಶ್ರೀನಿವಾಸನಿಗೆ ಹರಕೆ ಹೊತ್ತಿದ್ದರ ವರಪ್ರಸಾದದ ರೂಪದ ಫಲವಾಗಿ ಈ ಮಗು ಜನಿಸಿದ್ದರಿಂದ "ತಿಮ್ಮಪ್ಪ" ಎಂದೇ ನಾಮಕರಣ ಮಾಡಿದರು. ದಂಡನಾಯಕನಾಗಿದ್ದ ಬೀರಪ್ಪನು ವಿಜಯನಗರದ ಅರಸರುಗಳ ಅತೀವ ಮೆಚ್ಚುಗೆ, ಪ್ರೀತಿ–ವಿಶ್ವಾಸಗಳಿಗೆ ಪಾತ್ರನಾಗಿದ್ದನು.

ಈ ವೇಳೆಗಾಗಲೇ ನಾಡಿನಾದ್ಯಂತ ಶ್ರೀರಾಮಾನುಜರ ಮತವು ಸರ್ವವ್ಯಾಪಿಯಾಗಿ ನೆಲೆಸಿತ್ತು ಮತ್ತು ಅದು ತನ್ನ ಪ್ರಭಾವವನ್ನೆಲ್ಲಾ ಸುತ್ತಲೂ ಹರಡಿತ್ತು.[೪] ಆದ್ದರಿಂದ ಈ ಸಾಮ್ರಾಜ್ಯದ ಅರಸರೂ ಕೂಡಾ ವೈಷ್ಣವ ದೀಕ್ಷೆಯನ್ನೇ ಪಡೆದುಕೊಂಡು ಈ ಮತವನ್ನೇ ಅನುಸರಿಸುತ್ತಿದ್ದರು. ಆದ್ದರಿಂದ ನಾಡಿನ ಪ್ರಜೆಗಳೂ ಕೂಡಾ ಸೇವಕರು, ರಾಜ್ಯದ ಅಧಿಕಾರಿವರ್ಗಗಳೂ ಎಲ್ಲರೂ ಸೇರಿದಂತೆ ಇದೇ ಮತವನ್ನೇ ಅನುಸರಿಸುತ್ತಿದ್ದರು.

ಕನಕನು ದಂಡನಾಯಕನ ಮಗನಾದ್ದರಿಂದ ಕ್ಷತ್ರಿಯರಿಗೆ ಉಚಿತವಾದಂತಹ ಕತ್ತಿವರಸೆ, ಕುದುರೆಸವಾರಿ, ಕುಸ್ತಿ ಮೊದಲಾದ ಎಲ್ಲಾ ಯುದ್ಧವಿದ್ಯೆಗಳನ್ನೂ ತಾಂತ್ರಿಕವಾಗಿ ಪರಿಣಿತಿ ಪಡೆದಿದ್ದನು. ಆತನಲ್ಲಿ ವಯಸ್ಸಿಗೆ ಮೀರಿದ ದೈಹಿಕ ಹಾಗೂ ಮಾನಸಿಕ ಬೆಳವಣಿಗೆ ನೋಡಿದವರಿಗೆ ಅಚ್ಚರಿಯನ್ನುಂಟುಮಾಡುವಂತಿತ್ತು. ಬಾಲ್ಯದಿಂದಲೂ ಅಪಾರವಾದ ದೈವಭಕ್ತಿ ಹೊಂದಿದ್ದನು. "ಬಾಡ"ದಲ್ಲಿದ್ದ ಆದಿಕೇಶವನೇ ಮೊದಲಿನಿಂದಲೂ ಈತನ ಆರಾಧ್ಯದೈವನಾಗಿದ್ದನು. "ಬಾಡದಾದಿಕೇಶವ" ಎಂಬ ಅಂಕಿತಹೊಂದಿದ ಕೃತಿಗಳನ್ನು ನಾವು ಕಾಣಬಹುದಾಗಿದೆ.[೫]; ಅಂದರೆ, ಆಗಿನಿಂದಲೇ ಅವರು ಕೃತಿಗಳನ್ನು ರಚಿಸುತ್ತಿದ್ದರು ಎಂಬುದಕ್ಕೆ ಮಾಹಿತಿಗಳು ಸಿಗುತ್ತವೆ. ಆತನಲ್ಲಿದ್ದ ಉತ್ತಮ ಪ್ರತಿಭೆ, ವಾಚಾಳತ್ವ, ಯಕ್ಷಗಾನ-ಬಯಲಾಟಗಳಲ್ಲಿ ಭಾಗವಹಿಸುವ ಪರಿ, ಡೊಳ್ಳುಕುಣಿತದಲ್ಲಿ ಪಾಲ್ಗೊಳ್ಳುವ ರೀತಿ-ದೇವರ ಉತ್ಸವ-ಜಾತ್ರೆಗಳಲ್ಲಿ ತೋರಿಸುವ ಶ್ರದ್ಧೆ, ಭಕ್ತಿ-ಉತ್ಸಾಹಗಳು ನೋಡುವವರಲ್ಲೂ ಅಪಾರವಾದ ಉತ್ಸಾಹ ತುಂಬುವಂತಿತ್ತು. ಆದರೆ ದುರಾದೃಷ್ಟವಶಾತ್ ಆತನು ಬಾಲ್ಯದ ತನ್ನ ೧೦-೧೨ನೇ ವಯಸ್ಸಿನವನಿದ್ದಾಗಲೇ ಆತನ ತಂದೆ ಬೀರಪ್ಪನು ಕಾಲವಶನಾಗಿಬಿಟ್ಟನು. ಆದರೆ ಹೀಗೆ ಅಕಾಲ ಮರಣಕ್ಕೆ ತುತ್ತಾದ ತನ್ನ ತಂದೆಯ ಸಾವಿನಿಂದ ಕನಕನು ಎದೆಗುಂದದೆ ಊರವರ ಕೆಲಸಗಳಲ್ಲಿ ಭಾಗಿಯಾಗುತ್ತಾ, ಜನರಿಗಾಗಿಯೇ ದುಡಿಯುತ್ತ ಊರ ಜನರ ಕಣ್ಮಣಿಯಾದ. ಅದೇ ವೇಳೆಗೆ ಆತನಿಗೆ ಭೂಗರ್ಭದಲ್ಲಿ ಅಡಗಿದ್ದ ನಿಧಿಯೊಂದು ದೊರೆತು ಅದನ್ನು ಆತನು ಊರಬಡಜನರಿಗೆ, ದೇವಾಲಯದ ಜೀರ್ಣೋದ್ಧಾರ ಕೆಲಸಕ್ಕಾಗಿ ಮತ್ತು ಊರ ದೇವಾಲಯದ ಉತ್ಸವ-ಜಾತ್ರೆಗಳಿಗೆ ಉಪಯೋಗಿಸಿ ಊರ ಜನರ ಅಪಾರ ಪ್ರೀತಿಗೆ ಪಾತ್ರನಾಗಿ "ಕನಕಪ್ಪ" ಎಂಬ ಹೆಸರಿನಿಂದಲೇ ಪ್ರಸಿದ್ಧಿ ಹೊಂದಿದನು. ಈ ವೇಳೆಗಾಗಲೇ ಆತನು ಬಂಕಾಪುರದ ಶ್ರೀನಿವಾಸಾಚಾರ್ಯ ಎಂಬುವವರ ಬಳಿ ತರ್ಕ, ವ್ಯಾಕರಣ, ಮೀಮಾಂಸೆ, ಸಂಸ್ಕೃತ ಮೊದಲಾದ ಶಾಸ್ತ್ರ ವಿದ್ಯೆಗಳಲ್ಲಿ ಪಾರಂಗತನಾಗಿದ್ದನು.[೬] ಕನಕದಾಸರ ಕೀರ್ತನೆಗಳು, ಕಾವ್ಯಗಳು ಮತ್ತು ಇರತ ಕೃತಿಗಳನ್ನು ಗಮನಿಸಿದರೆ, ಅವರಿಗೆ ಕ್ರಮಬದ್ಧವಾದ ವಿದ್ಯಾಭ್ಯಾಸವಾಗಿತ್ತೆಂಬುದು ಮತ್ತು ಅವರು ಕನ್ನಡ-ಸಂಸ್ಕೃತ ಈ ಎರಡೂ ಭಾಷೆಗಳಲ್ಲೂ ಹೊಂದಿದ್ದರೆಂಬುದು ನಿರ್ವಿವಾದದ ವಿಷಯ.[೭] ಜೊತೆಗೆ ಅವರು ರಾಮಾಯಣ, ಭಾರತ, ಭಾಗವತ, ಹರಿವಂಶ-ಇತ್ಯಾದಿ ಪುರಾಣಗಳನ್ನೆಲ್ಲಾ ಸೊಗಸಾಗಿ ಬಲ್ಲವರಾಗಿದ್ದರು. ಅವರ ಸಮಕಾಲೀನರಾದ ಕುಮಾರವ್ಯಾಸ, ಕುಮಾರವಾಲ್ಮೀಕಿ ಮೊದಲಾದವರ ಸಾಹಿತ್ಯಕ ಪರಿಚಯವನ್ನು ಹೊಂದಿದ್ದು, ಅವರುಗಳಲ್ಲಿ ಗೌರವಭಾವನೆಯನ್ನೂ ಹೊಂದಿರುವಷ್ಟು ಹೃದಯವೈಶಾಲ್ಯತೆ ಅವರದಾಗಿತ್ತು. ಅಂತಹ ಮೃದು ಸ್ವಭಾವ ಮತ್ತು ಸರಳನಡತೆಯ ವ್ಯಕ್ತಿತ್ವ ಅವರದ್ದಾಗಿತ್ತು. ತಮ್ಮ "ಮೋಹನತರಂಗಿಣಿ" ಕಾವ್ಯದಲ್ಲಿ ಈ ಇಬ್ಬರೂ ಕವಿಗಳನ್ನು ಕೊಂಡಾಡಿದ್ದಾರೆ.

‘॥ಉರಗಾಲಯುವಿ ಪಿಸರ್ವಡಿದವನ ಮತ್ತೋದರ ಜಾತಿಯಾತ್ಮ ಸಂಭವನ ವರ
ಪುರಾಣಂಗಳ ಕನ್ನಡಿಸಿದ ಕವೀಶ್ವರರ ಕೊಂಡಾಡುವೆ ಮುದದಿ ॥’[೮]

ಇನ್ನು, ಯುದ್ಧವಿದ್ಯೆಯಲ್ಲಂತೂ ಈ ವೇಳೆಗಾಗಲೇ ಅವರು ಅಪಾರ ಪರಿಣಿತಿಯನ್ನು ಸಂಪಾದಿಸಿಬಿಟ್ಟಿದ್ದು. ಕ್ರಿ.ಶ.೧೫೦೯ರಲ್ಲಿ ಶ್ರೀಕೃಷ್ಣದೇವರಾಯನು ಸಾಮ್ರಾಜ್ಯದ ಆಳ್ವಿಕೆಗೆ ಬಂದ ನಂತರ ಕನಕನ ಪ್ರತಿಭೆ, ಸಾಹಸ, ಧೈರ್ಯ ಮತ್ತು ಇವುಗಳ ಜೊತೆಗೆ ಈತನಲ್ಲಿದ್ದಂತಹ ಸಾಮಾಜಿಕ ಹಿತಾಸಕ್ತಿ, ಜವಾಬ್ದಾರಿಯುತ ಕೆಲಸ-ಕಾರ್ಯಗಳ ನಿರ್ವಹಣೆ ಬಗ್ಗೆ ರಾಯನ ಕಿವಿಗೆ ಬಿದ್ದಕೂಡಲೇ ಆತನು ತಡಮಾಡದೆ ಕನಕನನ್ನು ಬಾಡ, ಬಂಕಾಪುರ, ಕಾಗಿನೆಲೆ ಸ್ಥಳಗಳು

ಸೇರಿದಂತೆ ಸುತ್ತ ನೂರಾರು ಗ್ರಾಮಗಳಿಗೆ ದಂಡನಾಯಕನಾಗಿ ನೇಮಿಸಿದನು.[೯] ಏಕೆಂದರೆ, ಅಂದಿನ ಕಾಲದಲ್ಲಿ ಈ ಪ್ರದೇಶಗಳು ರಾಜಕೀಯ ಕಾರಣಗಳಿಂದ ಬಹು ಸೂಕ್ಷ್ಮ ಪ್ರದೇಶಗಳಾಗಿದ್ದವು. ಅಂತಹ ಸ್ಥಳಗಳ ಆಡಳಿತಕ್ಕೆ ಕನಕನಂತಹ ಬಲಿಷ್ಠ ಮತ್ತು ಶ್ರೇಷ್ಠ ನಾಯಕನೇ ಅಗತ್ಯವೆಂದು ಅರಸನು ತೀರ್ಮಾನಿಸಿದ್ದನು. ಕನಕನು ಬಹಳ ಪರಾಕ್ರಮಿಯಾಗಿದ್ದನು. ಕೇವಲ ಕವಿಯಷ್ಟೇ ಅಲ್ಲ; ಕಲಿಯೂ ಆಗಿದ್ದನು ಎಂಬುದನ್ನು ಆತನು ಯುದ್ಧಗಳಲ್ಲಿ ಹೋರಾಡಿರುವಂತಹ ಸನ್ನಿವೇಶಗಳಿಂದಲೇ ತಿಳಿದುಕೊಳ್ಳಬಹುದಾಗಿದೆ. ಇಂತಹ ಕೆಲವು ಸಂದರ್ಭಗಳನ್ನು ವಿವರಿಸುವ ಕೀರ್ತನೆಗಳು ನಮಗೆ ಸಹಾಯಕವಾಗಿವೆ.

*'॥ ಕನಕ ದಳದಲಿ ಕಲಿತನೆಂದರೆ ಫೌಜು ।*
*ಕನಕು ಮನಕಾಗುವುದು ಹರಿಯೇ ॥'*[೧೦]

ಕನಕನನ್ನು ಅರಸನು ದಂಡನಾಯಕನಾಗಿ ನೇಮಿಸಿದ್ದನ್ನು ಕಂಡ ಆತನ ತಾಯಿಗೆ ಅಪಾರ ಸಂತಸವಾಯಿತು. ಶೀಘ್ರದಲ್ಲೇ ಮೊಮ್ಮಗುವನ್ನು ಕಾಣಬೇಕೆಂಬ ತವಕದಿಂದ ಮಗನಿಗೆ ಶ್ರೀಮಂತ ಮನೆತನದ ಹೆಣ್ಣೊಂದನ್ನು ತಂದು ವಿವಾಹಕಾರ್ಯ ನೆರವೇರಿಸಿದಳು. ಈ ಮಧ್ಯೆ ಅನೇಕ ರಾಜಕೀಯ ಚಟುವಟಿಕೆಗಳು ನಡೆದವು. ಅವುಗಳನ್ನು ಐತಿಹಾಸಿಕ ಅಥವಾ ರಾಜಕೀಯ ಹಿನ್ನೆಲೆ ಎಂಬ ಪ್ರತ್ಯೇಕ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿದೆ. ಅರಸನಾದ ಶ್ರೀಕೃಷ್ಣದೇವರಾಯನು ರಾಜ್ಯ ವಿಸ್ತರಣಾಕಾಂಕ್ಷಿಯಾಗಿ ದಿಗ್ವಿಜಯಯಾತ್ರೆಯಲ್ಲೇ ಮುಳುಗಿಹೋಗಿದ್ದನು. ಆನಂತರ ಕುಹೂ ಯೋಗಕ್ಕೆ ತುತ್ತಾದನು. ಅಷ್ಟರಲ್ಲಾಗಲೆ ಈ ಕಡೆ ಕನಕನ ಹೆಂಡತಿ ಒಂದು ಗಂಡು ಮಗುವಿಗೆ ಜನ್ಮವಿತ್ತಳಾದರೂ; ಹೆಂಡತಿ ಮತ್ತು ಮಗು ಇಬ್ಬರೂ ಕನಕನಿಂದ ಅನಿವಾರ್ಯ ಕಾರಣಗಳಿಂದಾಗಿ ದೂರಾಗಲೇಬೇಕಾದಂತಹ ಪರಿಸ್ಥಿತಿ ಒದಗಿಬಂದಿತು. ಸಾಲದೆಂಬಂತೆ ಇದರ ಜೊತೆಗೆ ಕನಕನ ತಾಯಿಯೂ ಕೂಡಾ ಮರಣ ಹೊಂದಿದಳು. ಸಾವು–ನೋವುಗಳ ಈ ದುಃಖದ ಸರಣಿ ಕನಕನಲ್ಲಿ ದೊಡ್ಡ ಆಘಾತವನ್ನೇ ಉಂಟುಮಾಡಿತು.

*'॥ ಅಡಿದಾಸನೆಂಬೋ ಎನಗೊಂದು ದೃಢ ಬುದ್ಧಿಯು ಇಲ್ಲದೆ ಮಡದಿ ಮಕ್ಕಳೆಂಬೋ*
*ಕಡಲೊಳು ಮುಳುಗಿದೆ ಕಡೆ ಹಾಯಿಸೊ ಎನ್ನೊಡೆಯ ನೀನಾದಡೆ ॥'*[೧೧]

ಇತ್ತಕಡೆ ಅರಮನೆಯಲ್ಲಿ ಶ್ರೀಕೃಷ್ಣದೇವರಾಯನೂ ಕೂಡಾ ಮಾನಸಿಕವಾಗಿ ಕೆಲವು ರಾಜಕೀಯ ಒತ್ತಡಗಳಿಂದ ಮತ್ತು ಕಾಯಿಲೆಬಿದ್ದು ದೈಹಿಕವಾಗಿಯೂ ಕುಸಿದುಬಿದ್ದಾಗ; ಅರಸನ ಮಗ ಪಟ್ಟಕ್ಕೇರಿದರೂ ಇನ್ನೂ ಆತನು ಚಿಕ್ಕಮಗುವಾಗಿದ್ದರಿಂದ ರಾಯನ ತಮ್ಮ ಅಚ್ಚ್ಯುತರಾಯನೇ ಆಡಳಿತಾಧಿಕಾರವನ್ನೆಲ್ಲಾ ವಹಿಸಿಕೊಂಡಿದ್ದನು. ಆದರೆ ಈತನು ಬಹಳ ಹೇಡಿಯಾಗಿದ್ದ ಕಾರಣ ಈತನ ಆಳ್ವಿಕೆಯಲ್ಲಿ ಹಿಂದೂ ಸಾಮ್ರಾಜ್ಯ ನುಚ್ಚುನೂರಾಗತೊಡಗಿತು.[೧೨] ಮುದುಗಲ್ ಮತ್ತು ರಾಯಚೂರು ಗಡಿನಾಡ ಕೋಟೆಗಳ ನಷ್ಟದೊಂದಿಗೆ ಈತನ ಆಳ್ವಿಕೆಗೆ ನಾಂದಿಯಾಯಿತು. ವಿಜಯನಗರ ಸಾಮ್ರಾಜ್ಯದ ರಾಜಕೀಯದ ಒಳನೋಟವು ಅಚ್ಚ್ಯುತರಾಯನ ಹಿಂಸಾತ್ಮಕ ನಿರಂಕುಶಪ್ರಭುತ್ವದಿಂದ ಬಹಳ ಗೊಂದಲಮಯ ವಾತಾವರಣವನ್ನೇ ಸೃಷ್ಟಿಮಾಡಿತು. ಅಷ್ಟೇಅಲ್ಲ, ಈತನು ತನ್ನ ಕೆಟ್ಟನಡವಳಿಕೆಯಿಂದಾಗಿ ತನ್ನ ಅನೇಕ ನೆಚ್ಚಿನ ಗೆಳೆಯರನ್ನು ದೂರಮಾಡಿಕೊಂಡನು. ಮತ್ತು ಸಾಮ್ರಾಜ್ಯಕ್ಕೆ ತಾನೊಬ್ಬ "ಅಂಜಗುಳಿ" ಎಂಬುದನ್ನು ದೃಢಪಡಿಸಿದ್ದಲ್ಲದೇ, ತನ್ನ ವರ್ತನೆ, ಆಡಳಿತ ವೈಖರಿಯಿಂದಾಗಿ ಇಡೀ ದಕ್ಷಿಣಭಾರತದಲ್ಲಿ ಹಿಂದೂ ಧರ್ಮ, ಸಂಸ್ಕೃತಿ,

ಸಂಪ್ರದಾಯದ ಧ್ಯೇಯಗಳಿಗೇ ಧಕ್ಕೆಯನ್ನುಂಟುಮಾಡಿ ಸುತ್ತಮುತ್ತಲಿನ ಪರಿಸರವನ್ನೇ ಹಾಳುಮಾಡಿದ. ಮತ್ತು ರಾಜಕೀಯವಾಗಿ ಇಡೀ ದೇಶವನ್ನು ಆಕ್ರಮಣಕಾರರಿಗೆ ತೆರೆದಿಟ್ಟನು.[೧೩]

ರಾಜಕೀಯವಾಗಿ ಇಂತಹ ವಿಷಮ ಪರಿಸ್ಥಿತಿಯ ನಡುವೆ ಕನಕನು ತನ್ನ ತಂದೆ, ತಾಯಿ, ಅಕ್ಕರೆಯ ಮಡದಿ, ಪ್ರೀತಿಯ ಮಗು ಎಲ್ಲರನ್ನೂ ಕಳೆದುಕೊಂಡ ಆತನ ಮನಸ್ಸು ಸಾಲು ಸಾಲು ಸಾವಿನ ದುರಂತಗಳಿಂದ ಜರ್ಜರಿತಗೊಂಡಿತು. ಕ್ರಮೇಣ ವೈರಾಗ್ಯದತ್ತ ವಾಲತೊಡಗಿದ್ದು ಸ್ವಾಭಾವಿಕತೆಗೆ ಬಹಳ ಸಮೀಪದ್ದೆನಿಸುತ್ತದೆ. ಜೀವನವೆಂಬ ಸಾಗರದ ಸಾವು–ನೋವುಗಳ ಈ ಭೀಕರ ಅಲೆಯಲ್ಲಿ ಮುಳುಗಿದ್ದಾಗಲೇ ಆತನು ಮತ್ತೊಂದು ಯುದ್ಧದಲ್ಲಿ ಭಾಗವಹಿಸಲೇಬೇಕಾದಂತಹ ಸಂದರ್ಭವೊದಗಿ ಬಂದಿತ್ತು. ಪರಿಶ್ರಮದಿಂದಲಾದರೂ ಮನಸ್ಸಿಲ್ಲದ ಮನಸ್ಸಿನಿಂದಲೇ ಬಹಳ ವೀರಾವೇಶದಿಂದ ಹೋರಾಡಿದರೂ ವಿಪರೀತ ಪೆಟ್ಟು ತಿಂದು ಮೈಯೆಲ್ಲಾ ಹುಣ್ಣಾಗಿ ಪ್ರಜ್ಞಾಹೀನಸ್ಥಿತಿ ತಲುಪಿ ನೆಲಕ್ಕುರುಳಿದಾಗಲೇ ಆತನು ತನ್ನ ಜೀವನದ ಅತ್ಯಂತ ಮಹತ್ತರವಾದ ತಿರುವೊಂದನ್ನು ಪಡೆದುಕೊಂಡಿದ್ದರು. ತಮ್ಮ ದೇಹ ಬಲವನ್ನೂ ಮೀರಿದ ದೈವ ಬಲಕ್ಕೆ ಮಣಿದು ಕನಕನಾಯಕನಾಗಿದ್ದವನು ಕನಕದಾಸರಾದರು.

'॥ ರಣದೊಳಗೆ ಅಂಗಾಂಗ ಖಂಡತುಂಡಾಗಿ ಪ್ರತಿ ।
ರಣವನುತ್ತರಿಸಿ ಮರಣವ ತಾಳಿರೆ ।
ಪ್ರಣವಗೋಚರ ನೀನು ಗೋಚರಿಸಿ ಬಂದೆನ್ನ ।
ಹಣಕೆ ಪ್ರಾಣವ ಪ್ರಯೋಗಿಸಿದಂತರಾತ್ಮ ॥' [೧೪]

ಕನಕದಾಸರ ಆತ್ಮಚರಿತ್ರೆಯಂತಿರುವ ಮತ್ತೊಂದು ಕೀರ್ತನೆಯು ಇವರ ಜೀವನಕ್ಕೆ ಸಂಬಂಧಿಸಿದ ಅನೇಕ ವಿಚಾರಗಳನ್ನು ನಮಗೆ ತಿಳಿಸುತ್ತದೆ.

'॥ ಮೊದಲು ನಿನ್ನುಪದೇಶಕೆದುರಿಸಿ ತಿರುಗಿ ನೀ
ನದನೆಲ್ಲ ಕ್ಷಮಿಸಿದೆಯಾ ಹರಿಯೇ
ಸುದತಿ ಮಕ್ಕಳ ಮೋಹ ಮದವೇರಿ ನಾನಿರಲು
ಪದುಮಾಕ್ಷ ನೀ ಬಂದು ಪದೇ ಪದೆಗೆ ಸಾರಿದೆಯೋ ॥'

॥ ಸಾರಿ ಹೊರಡುವ ಛತ್ರಿ ಭೇರಿ ಛಾಮರ ತಮ್ಮಟೆಗಳು
ಘೋರೆಂಬ ವಾದ್ಯಗಳು
ವೀರರಾಹುತ ಬಲವ ಭಾರವನು ತರಿದಹಂ
ಕಾರವನು ಮುರಿದೆ ॥

॥ ದೊರೆತನವ ಬಿಡಿಸಿ ಸುಸ್ಥಿರ ಮಾರ್ಗವನೆ ತೋರಿ
ಪರಿಪಾಲಿಸಿದೆಯೆನ್ನ

ದುರುಳ ತನದಲಿ ಜನರ ಪರಿ ಪರಿ ಬಾಧಿಸಿ

ನೊರೆಗೊಂಬುದು ಪರಿಹಾರವಾಯಿತು ಹರಿಯೇ ||' [೧೫]

– ಕನಕದಾಸರ ಈ ಕೀರ್ತನೆಯು ಅವರ ಜೀವನಕ್ಕೆ ಸಂಬಂಧಿಸಿದಂತೆ ಕೆಲವು ಮಾಹಿತಿಗಳನ್ನು ನಮಗೆ ಒದಗಿಸುತ್ತದೆ. ಅಂತೆಯೇ, ಅವರ ಜೀವನದ ಮಹತ್ತರ ತಿರುವಿಗೆ ಕಾರಣವಾದ ಬಹಳ ಮುಖ್ಯವಾದ ಘಟನೆಯನ್ನೂ ವಿವರಿಸುತ್ತದೆ. ಯುದ್ಧದಲ್ಲಿ ಕನಕನಾಯಕನು ತೋರುತ್ತಿದ್ದ ಶೌರ್ಯ, ಪರಾಕ್ರಮಗಳನ್ನು ಕಂಡು ಶತ್ರುಪಾಳಯದ ರಾಜರುಗಳು ಹೆದರಿ ನಡಗುತ್ತಿದ್ದುದು, ಯುದ್ಧದಲ್ಲಿ ಸೋತು ಮೈ-ಕೈಯೆಲ್ಲಾ ನುಜ್ಜುಗುಜ್ಜಾಗಿ ಅರೆಜೀವಕೊರೆಜೀವದಂತಾಗಿ ಯುದ್ಧಭೂಮಿಯಲ್ಲಿ ಸಾಯುತ್ತಾ ಬಿದ್ದಿದ್ದಾಗ, ಸಾಕ್ಷಾತ್ ಶ್ರೀಹರಿಯ ಗುರೂಪದೇಶ ಪಡೆದು ಆತನ ದಾಸನಾದ ನಂತರ; ಕನಕನಾಯಕನು ಕನಕದಾಸರಾದ ಬಗೆಯನ್ನು ಈ ಕೀರ್ತನೆ ವಿವರಿಸುತ್ತದೆ.

*** ** ***

## ✣ ⁜ ✣ ಅಡಿಟಿಪ್ಪಣಿಗಳು ✣ ⁜ ✣

೧. ಬನ್ನಂಜೆಗೋವಿಂದಾಚಾರ್ಯ "ಕನಕೋಪನಿಷತ್ತು", ಪು. ೮

೨. ಪ್ರೊ|| ವಸಂತಕುಷ್ಟಗಿ "ದಾಸಸಾಹಿತ್ಯದ ತವನಿಧಿಯಲ್ಲಿ", ಪು.೧೫೭

೩. "ಸದಾಸಾ" ಸಂ.೫, ಭಾ.೧, ಪು.೭೬, ಪ್ರೊ|| ಸುಧಾಕರ (ಸಂ), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ

೪. ––– " –––– ಅದೇ , ಪು. ೨೪

೫. ––– "" ____ ಅದೇ, ಪು. ೨೭

೬. ಡಾ|| ಎನ್.ಕೆ.ರಾಮಶೇಷನ್ "ಹರಿದಾಸ ಆಂದೋಲನ", ಪು.೧೯೪

೭. ಟಿ.ಎನ್. ನಾಗರತ್ನ "ಕನಕದಾಸ", ಭಾರತೀಯ ಸಾಹಿತ್ಯ ನಿರ್ಮಾಪಕರು, ಪು.೨೭

೮. "ಸದಾಸಾ" ಸಂ.೫, ಭಾ.೧, ಪು.೩೧, ಪ್ರೊ|| ಸುಧಾಕರ (ಸಂ), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ.

೯. "ಸದಾಸಾ" ಸಂ.೫, ಭಾ.೧, ಪು.೨೭, ಪ್ರೊ|| ಸುಧಾಕರ (ಸಂ), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ

೧೦. "ಸದಾಸಾ" ಸಂ.೫, ಭಾ.೧, ಪು.೬೪, ಪ್ರೊ|| ಸುಧಾಕರ (ಸಂ), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ

೧೧. "ಸದಾಸಾ" ಸಂ.೫, ಭಾ.೧, ಪು.೯೫, ಪ್ರೊ|| ಸುಧಾಕರ (ಸಂ), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ

೧೨. ರಾಬರ್ಟ ಸ್ವೆಲ್ "ಮರೆತುಹೋದ ಸಾಮ್ರಾಜ್ಯ" (ಅ) ಡಾ.ಸದಾನಂದ ಕನವಳ್ಳಿ, ಪು.೧೭೯

೧೩. ರಾಬರ್ಟ ಸ್ವೆಲ್ "ಮರೆತುಹೋದ ಸಾಮ್ರಾಜ್ಯ" (ಅ) ಡಾ.ಸದಾನಂದ ಕನವಳ್ಳಿ, ಪು.೧೯೦

೧೪. "ಸದಾಸಾ" ಸಂ.೫, ಭಾ.೧, ಪು.೬೩, ಪ್ರೊ ಸುಧಾಕರ (ಸಂ), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ

೧೫ "ಸದಾಸಾ" ಸಂ.೫, ಭಾ.೧, ಪು.೬೪, ಪ್ರೊ ಸುಧಾಕರ (ಸಂ), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ

*** ** ***

## ಇ) ಕಾಲ

ದಾಸಸಾಹಿತ್ಯವು ವ್ಯಾಸಕೂಟದ ಮೂಲಕ ಪ್ರಥಮವಾಗಿ ಆಚಾರ್ಯ ಶ್ರೀಮಧ್ವರ ದ್ವಾದಶಸ್ತೋತ್ರದಿಂದ ಮೊದಲುಗೊಂಡು ಪ್ರಮುಖ ಯತಿಗಳಾದ ನರಹರಿತೀರ್ಥರು, ಶ್ರೀಪಾದರಾಜರು, ವ್ಯಾಸರಾಜರು, ವಾದಿರಾಜರಿಂದ ಮುಖ್ಯವಾಹಿನಿಯಾಗಿ ಹರಿದುಬಂದಿದೆ. ಸುಪ್ರಸಿದ್ಧ ದೊರೆ ಶ್ರೀಕೃಷ್ಣದೇವರಾಯನು ಕ್ರಿ.ಶ. ೧೫೦೯ರಲ್ಲಿ ಆಳ್ವಿಕೆಗೆ ಬಂದಾಗ "ದಾಸಸಾಹಿತ್ಯದ ಸುವರ್ಣಯುಗ" ಎಂದೇ ಹೇಳಬಹುದು. ಆಗ ಶ್ರೀಪಾದರಾಜರ ನಂತರ ವಿಜಯನಗರ ಸಾಮ್ರಾಜ್ಯದ ರಾಜಗುರುಗಳಾಗಿ ಶ್ರೀವ್ಯಾಸರಾಜರು ಧರ್ಮಪೀಠವನ್ನು ಅಲಂಕರಿಸಿದ್ದರು. ಆಗಲೇ ಶ್ರೀ ವಾದಿರಾಜರೂ ಕೂಡಾ ಕ್ರಿ.ಶ. ೧೪೮೦–೧೬೦೦ರ ವೇಳೆಯಲ್ಲಾಗಲೇ ತುಳುನಾಡಿನುದ್ದಕ್ಕೂ ದಾಸಸಾಹಿತ್ಯದ ಕಂಪನ್ನು ಪಸರಿಸಿದ್ದರು.[೧] ವ್ಯಾಸಕೂಟದ ಶ್ರೀ ವ್ಯಾಸರಾಜರು, ಶ್ರೀ ವಾದಿರಾಜರು ಆತ್ಮೀಯರಾಗಿ ಕರ್ನಾಟಕದಾದ್ಯಂತ ದಾಸಸಾಹಿತ್ಯವನ್ನು ಶ್ರೀಮಂತಗೊಳಿಸಿದಂತೆ ದಾಸಕೂಟದ ಶ್ರೀಪುರಂದರದಾಸರು ಮತ್ತು ಶ್ರೀಕನಕದಾಸರು ಇಬ್ಬರೂ ಸೇರಿ ದಾಸಸಾಹಿತ್ಯದ ಏಳಿಗೆಗಾಗಿ, ಸಮಾಜೋದ್ಧಾರಕ್ಕಾಗಿ ಶ್ರಮಿಸಿದ್ದಾರೆ. ಒಟ್ಟಾರೆ, ಈ ನಾಲ್ಕೂ ಜನ ಸಮಕಾಲೀನರು. ಆದರೆ ಕನಕದಾಸರ ಕಾಲದ ಬಗ್ಗೆ ನಿರ್ಧರಿಸಲು ವಿದ್ವಾಂಸರಲ್ಲಿ ಖಚಿತವಾಗಿ ಒಮ್ಮತದ ಅಭಿಪ್ರಾಯವಿಲ್ಲ. ಆದರೆ ವಾಸ್ತವಕ್ಕೆ ಹೆಚ್ಚು ಹತ್ತಿರವಾಗಿರುವಂತೆ ಕೆಲವರ ಪ್ರಕಾರ ಕ್ರಿ.ಶ. ೧೪೮೦–೧೫೭೦ ಎಂದಾಗಿದ್ದರೆ, ಮತ್ತೆ ಕೆಲವರ ಪ್ರಕಾರ ಕ್ರಿ.ಶ. ೧೪೮೮–೧೫೭೮ ಎನ್ನುತ್ತಾರೆ.[೨] ಆದರೆ ಸರ್ವಮತದ ಪ್ರಕಾರ ಮತ್ತು ವಾಸ್ತವತೆಗೆ ತುಂಬಾ ಸಮೀಪವಾಗಿರುವಂತೆ ಸಂಶೋಧನೆ, ಅಧ್ಯಯನಗಳು ನಡೆಸಿದುದರ ಫಲವಾಗಿ ಕ್ರಿ.ಶ.೧೫೦೯–೧೬೦೬ ಎಂಬ ಕಾಲವನ್ನು ನಿರ್ಧರಿಸಲಾಗಿದೆ.[೩]

ಹೀಗೆ ಕನಕದಾಸರ ಜೀವಿತದ ಅವಧಿ ಇನ್ನೂ ಖಚಿತವಾಗಿ ನಿರ್ಧಾರವಾಗಿರದಿದ್ದರೂ, ಅವರ ಕೃತಿಗಳು ಮತ್ತು ಅದರೊಳಗಿರುವ ಕೆಲವು ಮಾಹಿತಿಗಳು, ಕೃತಿಗಳೊಳಗೆ ಕೊಂಡಾಡಿರುವ ಸಮಕಾಲೀನ ಕವಿಗಳು, ಗುರುಗಳು, ಹಿರಿಯರು, ಅರಸರುಗಳು ಮೊದಲಾದವರ ಕಾಲಾವದಿಯನ್ನು ಗುರ್ತಿಸುವುದರ ಮುಖಾಂತರ ನಿರ್ಧರಿಸಬಹುದಾಗಿದೆ. ಕನಕದಾಸರು ರಚಿಸಿರುವ ಕಾವ್ಯಗಳು ಮತ್ತು ಇತರ ಕೃತಿಗಳಲ್ಲಿ ಚಿತ್ರಿಸಿರುವ ಸಾಮಾಜಿಕ, ರಾಜಕೀಯ ಘಟನೆಗಳೂ ಕೂಡಾ ಬಹುಶಃ ಇವರ ಕಾಲಾವಧಿಯನ್ನು ಗುರ್ತಿಸಲು ನಮಗೆ ನೆರವಾಗುತ್ತವೆ. ಶ್ರೀವ್ಯಾಸರಾಜರು ಬೃಂದಾವನಸ್ಥರಾದುದು ಕ್ರಶ. ೧೫೩೯ರಲ್ಲಿ. ಶ್ರೀಕೃಷ್ಣದೇವರಾಯನು ಆಳ್ವಿಕೆಗೆ ಬಂದದ್ದು ಕ್ರಿ.ಶ. ೧೫೦೯ರಲ್ಲಿ. ಆತನಿಗೆ ಕುಹೂ ಯೋಗದ ವಿಪತ್ತು ಒದಗಿ ಬಂದುದು, ಗುರುಗಳು ಅದನ್ನು ನಿವಾರಣೆ ಮಾಡಿದ್ದು ಕ್ರಿ.ಶ. ೧೫೨೧ರಲ್ಲಿ.[೪]

ಕನಕದಾಸರು ಶ್ರೀವ್ಯಾಸರಾಜರ ಬಳಿಗೆ ಶ್ರೀಮಠಕ್ಕೆ ಬಂದು ಸೇರುವಷ್ಟರಲ್ಲಾಗಲೇ ಪುರಂದರದಾಸರು ಗುರುಗಳಿಂದ ದೀಕ್ಷೆ ಪಡೆದುಕೊಂಡಿದ್ದರು. ಈ ಇಬ್ಬರೂ ಈ ಗುರುಗಳ ನೇತೃತ್ವದಲ್ಲಿಯೇ ಹರಿದಾಸರಾದದ್ದು. ಕನಕದಾಸರು ತಮ್ಮ "ಮೋಹನತರಂಗಿಣಿ" ಕೃತಿಯಲ್ಲಿ ನೀಡಿರುವ ವಿಜಯನಗರ ಸಾಮ್ರಾಜ್ಯದ ಸಾಮಾಜಿಕ, ರಾಜಕೀಯ, ಧಾರ್ಮಿಕ ವರ್ಣನೆಗಳು, ರಾಯಚೂರು ಯುದ್ಧದ ದೃಶ್ಯಗಳು- ಇತ್ಯಾದಿ ಅಂಶಗಳೆಲ್ಲವೂ ಕನಕದಾಸರು ಸುಮಾರು ಕ್ರಿ.ಶ. ೧೪೮೮ರಲ್ಲಿ ಜನಿಸಿದರೆಂಬುದಕ್ಕೆ ಪುಷ್ಟಿ ನೀಡುವಂತಿದೆ.[೫]

ಕನಕದಾಸರು ಈ ಕೃತಿಯಲ್ಲಿ "ಕನ್ನಡಕುಲತಿಲಕ" ಶ್ರೀಕೃಷ್ಣದೇವರಾಯನನ್ನು ವಿಜಯನಗರ ಸಾಮ್ರಾಜ್ಯದ ಸುಪ್ರಸಿದ್ಧ ದೊರೆಯಾಗಿ ಮಾತ್ರವಲ್ಲದೆ; ದ್ವಾರಕೆಯ ದೊರೆ ಜಗದೊಡೆಯನಾದ ಶ್ರೀಕೃಷ್ಣನಿಗೇ ಸಮೀಕರಿಸಿ ಚಿತ್ರಿಸಿದ್ದಾರೆ. ಮತ್ತು ಶ್ರೀರಾಮಾನುಜರು ಮತ್ತು ತಾತಾಚಾರ್ಯರನ್ನೂ ಸ್ಮರಿಸಿದ್ದಾರೆ.[೬] ಜೊತೆಗೆ "ಗದುಗಿನಭಾರತ" ರಚಿಸಿದ ಕುಮಾರವ್ಯಾಸನನ್ನು ಮತ್ತು "ತೊರವೆರಾಮಾಯಣ" ಬರೆದ ಕುಮಾರ ವಾಲ್ಮೀಕಿ ಕವಿಯನ್ನೂ ಸ್ಮರಿಸಿದ್ದಾರೆಂದರೆ, ಇವರು ಅವರಿಬ್ಬರ ಸಮಕಾಲೀನರೇ ಆಗಿರುತ್ತಾರೆ ಅಥವಾ ಅವರಿಬ್ಬರಿಗಿಂತ ಈಚಿನವರು ಎಂದು ಊಹಿಸಬಹುದು ಮತ್ತು ಶ್ರೀಕೃಷ್ಣದೇವರಾಯನ ಆಡಳಿತಾವಧಿಯಲ್ಲಿ ಇವರು ಜೀವಿಸಿದ್ದರು ಎಂಬ ಅಂಶ ನಮಗೆ ತಿಳಿಯುತ್ತದೆ. ಅಲ್ಲದೆ, "ಮೋಹನತರಂಗಿಣಿ"ಯಲ್ಲಿ ಕನಕದಾಸರು "ಪೆಟಲಂಬಿನವರ"-ಎಂಬ ಶಬ್ದದ ಉಲ್ಲೇಖ ಮತ್ತು ಪ್ರಸ್ತಾಪ ಮಾಡಲಾಗಿದೆ.[೭] ಇದನ್ನು ಗಮನಿಸಿದರೆ, ಕ್ರಿ.ಶ. ೧೫೨೦ರಲ್ಲಿ ನಡೆದ ರಾಯಚೂರು ಯುದ್ಧದಲ್ಲಿ ಮಾಡಿದ "ತುಬಾಕಿ"ಗಳ ಬಳಕೆಯಿಂದಾಗಿ ಇವರ ಕಾಲವನ್ನು ಮತ್ತಷ್ಟು ಸ್ಥಿರವಾಗಿ ನಿರ್ಧರಿಸಲು ನಮಗೆ ಸಹಾಯಕವಾಗುತ್ತದೆ. "ಪೆಟಲಂಬಿನವರ" ಎಂದರೆ, "ತುಬಾಕಿಯವರು" ಎಂದರ್ಥ. ಇದರಿಂದ ಅವರು ಈ ಯುದ್ಧ ನಡೆದ ಸಮಯದಲ್ಲಿ ಜೀವಿಸಿದ್ದರೆಂಬುದು ಮತ್ತಷ್ಟು ಸ್ಪಷ್ಟವಾಗುತ್ತದೆ. ಮತ್ತೊಂದು ಅಂಶವೆಂದರೆ, ಕನಕದಾಸರು ಈ ಕೃತಿಯಲ್ಲಿ ಅನಿರುದ್ಧನ ಜನನ ಕಾಲವನ್ನು "॥ ಆನಂದ ಸಂವತ್ಸರ ಮಾಘ ಶುದ್ಧ ನವೀನ ಪಂಚಮಿ ರವಿವಾರ ಭಾನು ಉದಯದ ಸ್ವಾತಿ ನಕ್ಷತ್ರ ॥"[೮] ಎಂಬುದಾಗಿ ಉಲ್ಲೇಖಿಸಿದ್ದಾರೆ. ಆದರೆ, ಈ ದಿನಾಂಕವನ್ನು ಶೇಷಾಚಾರ್ಯ ಕಟ್ಟಿಯವರು "ಇಲ್ಲಿ ನಮೂದಿಸಿರುವುದು ಗ್ರಂಥರಚನೆಯ ಕಾಲವೇ ಹೊರತು ಕನಕದಾಸರ ಜನ್ಮಕಾಲವಲ್ಲ" ಎಂದಿದ್ದಾರೆ. ಆದರೆ, "ಗ್ರಂಥರಚನೆಯ ಕಾಲವನ್ನು ಗ್ರಂಥದ ಅಂತ್ಯಭಾಗದಲ್ಲಿ ಹೇಳುತ್ತಾರೇ ಹೊರತು ಗ್ರಂಥದ ಮಧ್ಯಭಾಗದಲ್ಲಲ್ಲ; ತಮ್ಮ ಜನ್ಮದಿನವನ್ನು ನೇರವಾಗಿ ಹೇಳಲು ಬಹುಶಃ ಸಂಕೋಚವಾಗಿ ಅವರು ಇದನ್ನು ಅನಿರುದ್ಧನ ಜನ್ಮಕಾಲದೊಡನೆ ಸೂಚ್ಯಂಕವಾಗಿ ಸಂಲಗ್ನಗೊಳಿಸಿದ್ದಾರೆ."[೯] ಆದ್ದರಿಂದ ಕನಕದಾಸರ ಜನ್ಮಕಾಲವನ್ನು ನಿರ್ಧಿಷ್ಟವಾಗಿ ಫೆಬ್ರವರಿ ೧೫ ಕ್ರಿ.ಶ. ೧೪೯೫ ಎಂದು ನಿರ್ಧರಿಸಬಹುದಾಗಿದೆ. ಮತ್ತು ಕ್ರಿ.ಶ. ೧೫೩೦ ರಲ್ಲಿ ಶ್ರೀಕೃಷ್ಣದೇವರಾಯನು ಮರಣಹೊಂದಿದನು.[೧೦] ಆಗ ಕನಕದಾಸರಿಗೆ ೩೫ ವರ್ಷ ವಯಸ್ಸಾಗಿತ್ತೆಂದು ಈ ಮೂಲಕ ನಮಗೆ ತಿಳಿದುಬರುತ್ತದೆ.

ಇವಿಷ್ಟೂ ಅಂಶಗಳೂ ಕನಕದಾಸರ ಜನನದ ಕಾಲವನ್ನು ಖಚಿತಗೊಳಿಸಲು ಸಹಾಯಕಾರಿಯಾದರೆ; ಇನ್ನು ಅವರ ಮರಣದ ಸಮಯವನ್ನು ಲೆಕ್ಕ ಹಾಕಲು ಕೆಲವು ಪ್ರಮುಖವಾದ ಅಂಶಗಳನ್ನು ನಾವು ಇಲ್ಲಿ ಗಮನಿಸಬಹುದಾಗಿದೆ.

ಕ್ರಿ.ಶ. ೧೫೩೯ರಲ್ಲಿ ಶ್ರೀವ್ಯಾಸರಾಜರು ಬೃಂದಾವನಸ್ಥರಾದರು ಮತ್ತು ಕ್ರಿ.ಶ. ೧೫೬೪ ರಲ್ಲಿ ಶ್ರೀಪುರಂದರದಾಸರು ತಮ್ಮ ಅಂತ್ಯಕಲವನ್ನು ಸಮೀಪಿಸಿದ್ದು. ಈ ಪ್ರಮುಖ ಎರಡು ಘಟನೆಗಳ ನಂತರವೂ ಕೆಲವು

ಕಾಲ ಕನಕದಾಸರು ಜೀವಿಸಿದ್ದರು.೧೧ ಈವಿಷಯವನ್ನು ಅವರ ಕೆಲವು ಕೃತಿಗಳೇ ಪುಷ್ಟೀಕರಿಸುತ್ತವೆ. ರಕ್ಕಸತ್ತಂಗಡಿ ಯುದ್ಧ ನಡೆದದ್ದು ಕ್ರಿ.ಶ. ೧೫೬೫ರಲ್ಲಿ.[೧೨] ಈ ಯುದ್ಧದ ನಂತರ ವಿಜಯನಗರ ಸಾಮ್ರಾಜ್ಯದಲ್ಲಿದ್ದಂತಹ ಸಾಮಾಜಿಕ, ರಾಜಕೀಯ ಸ್ಥಿತಿ-ಗತಿಗಳು, ಶ್ರೀಕೃಷ್ಣದೇವರಾಯನ ಆಳ್ವಿಕೆ, ಮರಣಗಳ ನಂತರ ಆಡಳಿತಕ್ಕೆ ಬಂದಂತಹವರಲ್ಲಿ ಮುಖ್ಯಸ್ಥನಾದ ರಾಮರಾಯನ ಅಹಂಕಾರ, ಅಹಮದ್ ನಗರದ ಆಕ್ರಮಣ, ವಿಜಯನಗರದ ವಿರುದ್ಧ ಮಹಮ್ಮದೀಯರ ಒಗ್ಗಟ್ಟು - ಐದು ರಾಜರ ಒಕ್ಕೂಟದ ಪಿತೂರಿ, ತಾಳೀಕೋಟೆ ಕದನದ ನಿರ್ಣಾಯಕ ಹಂತ ಎನಿಸಿದ್ದು, ಈ ಯುದ್ಧದ ಸೋಲಿನೊಂದಿಗೆ ರಾಮರಾಯನ ಮರಣದ ನಂತರ ಇಡೀ ವಿಜಯನಗರದ ಸುಲಿಗೆ, ರಕ್ತಪಾತ, ರಾಜಕುಟುಂಬದ ಪಲಾಯನ- ಇತ್ಯಾದಿ ಘಟನೆಗಳು ಬಹು ತೀವ್ರವಾಗಿ ಸಂಭವಿಸಿತು.[೧೩] ಈ ಎಲ್ಲಾ ಘಟನೆಗಳ ಕುರಿತಾದ ಸ್ಪಷ್ಟ ಚಿತ್ರಣವನ್ನು ನಮಗೆ ಕನಕದಾಸರ "ಕಲಿಯುಗದ ಮಹಿಮೆಯನು", "ಕಲಿಯು ಹೆಚ್ಚಿತಲ್ಲ", "ಖಣಿಯ ಹೇಳಬಂದೆ", "ದುರ್ಜನರ ಸಂಗ ಎಂದಿಗೂ"-ಇತ್ಯಾದಿ ಕೃತಿಗಳಿಂದ ತಿಳಿದುಬರುತ್ತವೆ. ಈ ಎಲ್ಲಾ ಕೃತಿಗಳ ಜೊತೆಗೆ ಕನಕದಾಸರ ಜೀವಿತದ ಕಾಲಾವಧಿಯನ್ನು ನಿರ್ಧರಿಸಲು ನಮಗೆ ಸಹಾಯಕವಾಗುವ ಮತ್ತೊಂದು ಅತ್ಯಂತ ಪ್ರಮುಖವಾದ ಅಂಶವೆಂದರೆ; ರಾಜಾಸ್ಥಾನದ ದೊರೆ ರಾಣಾಪ್ರತಾಪ್ ಸಿಂಗ್ ಕ್ರಿ.ಶ. ೧೫೭೨ರಿಂದ ಕ್ರಿ.ಶ. ೧೫೯೭ ರವರೆಗೆ ರಾಜ್ಯವಾಳಿದನು. ಈತನ ಕನಸ್ಸಿನಲ್ಲಿ ಕನಕದಾಸರು ಬಂದು ಕಾಣಿಸಿಕೊಂಡು ತಾವು ದೇಹತ್ಯಾಗ ಮಾಡುವ ಸೂಚನೆ ನೀಡಿದ್ದರಂತೆ.[೧೪] ಆಗ ಕೂಡಲೇ ಆತನು ತನ್ನ ಫೌಜೀದಾರನೊಬ್ಬನನ್ನು ಕರ್ನಾಟಕದ ಕಾಗಿನೆಲೆಗೆ ಕಳುಹಿಸಿದ. ಆತನು ನಿಖರವಾದ ಸುದ್ದಿ ತಿಳಿಸಲು, ರಾಣಾಪ್ರತಾಪ ಸಿಂಹನು ರಾಜಾಸ್ಥಾನದ ಜಯಪುರದಲ್ಲಿರುವ ತನ್ನ ಅರಮನೆಯ ಆವರಣದಲ್ಲಿ "ಕನಕಬೃಂದಾವನ" ನಿರ್ಮಿಸಿರುವುದನ್ನು ನಾವೀಗಲೂ ಕಾಣಬಹುದಾಗಿದೆ.

ಒಟ್ಟಾರೆ, ಈ ದಾಖಲೆಗಳು ಮತ್ತು ಮಾಹಿತಿಗಳನ್ನೆಲ್ಲಾ ದೃಷ್ಟಿಯಲ್ಲಿಟ್ಟುಕೊಂಡು ಕನಕದಾಸರು ಸುಮಾರು ೯೮ ವರ್ಷಗಳ ಕಾಲ ಜೀವಿಸಿದ್ದರೆಂದು ತಿಳಿದುಬರುತ್ತದೆ. ಹೀಗಾಗಿ ಅವರ ಜನನ-ಮರಣದ ಕಾಲವನ್ನು ಸುಮಾರು ಕ್ರಿ.ಶ. ೧೪೯೫-೧೫೯೪ ಎಂಬುದಾಗಿ ಸ್ಪಷ್ಟವಾಗುತ್ತದೆ.

*** ** ***

## ✣ ⁜ ✣ ಅಡಿಟಿಪ್ಪಣಿಗಳು ✣ ⁜ ✣

೧. ಬನ್ನಂಜೆಗೋವಿಂದಾಚಾರ್ಯ "ಕನಕೋಪನಿಷತ್ತು", ಪು.೮

೨. ---"--- ಅದೇ

೩. ---"--- ಅದೇ

೪. ಡಾ॥ ಎನ್.ಕೆ.ರಾಮಶೇಷನ್ "ಹರಿದಾಸ ಆಂದೋಲನ", ಪು.೧೯೩

೫. ---"--- ಅದೇ

೬. "ಸದಾಸಾ" ಸಂ.೫, ಭಾ.೧, ಪು.೩೦, ಪ್ರೊ॥ ಸುಧಾಕರ (ಸಂ), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ

೭. ರಾಬರ್ಟ ಸ್ವೆಲ್ "ಮರೆತುಹೋದ ಸಾಮ್ರಾಜ್ಯ" (ಅ) ಡಾ.ಸದಾನಂದ ಕನವಳ್ಳಿ, ಪು.೧೫೧

೮. "ಸದಾಸಾ" ಸಂ.೫, ಭಾ.೧, ಪು.೩೩, ಪ್ರೊ॥ ಸುಧಾಕರ (ಸಂ), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ

೯. ಡಾ॥ ಎನ್.ಕೆ.ರಾಮಶೇಷನ್ "ಹರಿದಾಸ ಆಂದೋಲನ", ಪು.೧೯೭

೧೦. ರಾಬರ್ಟ ಸ್ವೆಲ್ "ಮರೆತುಹೋದ ಸಾಮ್ರಾಜ್ಯ" (ಅ) ಡಾ.ಸದಾನಂದ ಕನವಳ್ಳಿ, ಪು.೧೪೯

೧೧. ಬೇಲೂರು ಕೇಶವದಾಸರು "ಕರ್ನಾಟಕ ಭಕ್ತಿ ವಿಜಯ", ಪು.೩೯೫

೧೨. ರಾಬರ್ಟ ಸ್ವೆಲ್ "ಮರೆತುಹೋದ ಸಾಮ್ರಾಜ್ಯ" (ಅ) ಡಾ.ಸದಾನಂದ ಕನವಳ್ಳಿ, ಪು.೨೧೫

೧೩. ರಾಬರ್ಟ ಸ್ವೆಲ್ "ಮರೆತುಹೋದ ಸಾಮ್ರಾಜ್ಯ" (ಅ) ಡಾ.ಸದಾನಂದ ಕನವಳ್ಳಿ, ಪು.೨೧೩

೧೪. "ಸದಾಸಾ" ಸಂ.೫, ಭಾ.೧, ಪು.೩೫, ಪ್ರೊ॥ ಸುಧಾಕರ (ಸಂ), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ

✷✷✷ ✶✶ ✷✷✷

## ಈ) ಸ್ಥಳ

ಕನಕದಾಸರ ಕಾಲದ ಬಗೆಗೆ ಹಲವಾರು ಭಿನ್ನಾಭಿಪ್ರಾಯಗಳು ವಿದ್ವಾಂಸರುಗಳಲ್ಲಿರುವಂತೆಯೇ ಅವರ ಸ್ಥಳದ ಬಗೆಗೂ ನಡೆದಿದೆ. ಕೆಲವು ವಿದ್ವಾಂಸರು "ಕನಕದಾಸರು ದೇಹ ತೊರೆದದ್ದು ಕಾಗಿನೆಲೆಯಲ್ಲಿ".[೧] ಎಂದರೆ, ಮತ್ತೆ ಕೆಲವು ವಿದ್ವಾಂಸರು "ಕನಕದಾಸರು ಹುಟ್ಟಿದ್ದು ಕಾಗಿನೆಲೆ ಸಮೀಪದ ಕಮ್ಮೂರಿನಲ್ಲಿ.[೨] ಎಂದರೆ, ಮತ್ತೊಬ್ಬರು ದೇಹತ್ಯಾಗ ಮಾಡಿದ್ದು ತಿರುಪತಿಯಲ್ಲಿ.[೩] ಎಂದಿದ್ದಾರೆ. ಮತ್ತೊಬ್ಬ ವಿಮರ್ಶಕರು "ಕನಕದಾಸರ ಹುಟ್ಟೂರು ಹಾಸನ ಜಿಲ್ಲೆಯ ಬೇಲೂರು ಸಮೀಪದ ಒಂದು ಹಳ್ಳಿಯಿರಬೇಕು.[೪] ಎನ್ನುತ್ತಾರೆ. ಸಾರ್ವತ್ರಿಕ ನಂಬಿಕೆಯಂತೆ, ಕನಕದಾಸರು ಹುಟ್ಟಿದ್ದು ಹಾವೇರಿ ಜಿಲ್ಲೆಯ ಬಂಕಾಪುರ ಸಮೀಪದ "ಬಾಡ" ಗ್ರಾಮ.[೫] ಆದರೆ ಕನಕದಾಸರು ಹರಿದಾಸರಾಗುವ ಮೊದಲು ಕಾಗಿನೆಲೆಯವರಾಗಿದ್ದು, ಬಾಡದೊಂದಿಗೆ ನಿಕಟ ಸಂಪರ್ಕ ಹೊಂದಿರಲೇಬೇಕು. ಏಕೆಂದರೆ, 'ಬಾಡದಾಸ', 'ಬಾಡದಾದಿಕೇಶವ', 'ಬಾಡಾದಿಕೇಶವ' ಎನ್ನುವ ಅಂಕಿತಗಳು ಅವರ ಕೆಲವು ಕೀರ್ತನೆಗಳಲ್ಲಿವೆ. ಇವೆರಡರಲ್ಲಿ ಯಾವುದು ಅವರ ಹುಟ್ಟೂರು ಎಂಬುದು ಇನ್ನೂ ಖಚಿತವಾಗಿಲ್ಲ.[೬] ಇತಿಹಾಸದಂತೆ ಬಾಡ, "ಪನ್ನೆರಡರ", "ಹಿರಿಯೂರಾದಂತೆ" ಕಾಗಿನೆಲೆ ಕ್ರಿ.ಶ. ೧೦ ನೇ ಶತಮಾನ ಕಾಲದಿಂದಲೇ ಪ್ರಸಿದ್ಧಿ ಪಡೆದ, ಆನಂತರ ವಿಜಯನಗರದ ಪಡಿಮೂಲೆಯಾಗಿ ಮೆರೆದ ಊರು. "ಊರು" ಎಂಬುದಕ್ಕಿಂತಲೂ "ಕಾಗಿನೆಲೆಪುರ" ಎಂದೇ ಶಾಸನಗಳು ವರ್ಣಿಸುತ್ತವೆ.[೭]

ಒಟ್ಟಾರೆ, "ಬಾಡ", "ಕಾಗಿನೆಲೆ" – ಈ ಎರಡೂ ಕ್ಷೇತ್ರಗಳು ಕನಕದಾಸರ ಸಾಧನೆಗೆ ಸಂಬಂಧಿಸಿದ ಅತ್ಯಂತ ಮಹತ್ವಯುತವಾದಂತಹ ಸ್ಥಳಗಳಾಗಿದ್ದು, ಕೇವಲ ವಿಜಯನಗರ ಸಾಮ್ರಾಜ್ಯದ ಕಾಲಕ್ಕಷ್ಟೇ ಅಲ್ಲ; ಹೊಯ್ಸಳರ ಕಾಲದಿಂದಲೂ ಪ್ರಮುಖ ಸಾಂಸ್ಕೃತಿಕ ಕೇಂದ್ರಗಳಾಗಿದ್ದವು. ಇದಕ್ಕೆ ಪ್ರಮುಖ ಆಧಾರವೆಂದರೆ, ಬಿಜಾಪುರದ ಆದಿಲ್‌ಷಹನ ಆಕ್ರಮಣಕ್ಕೆ ತುತ್ತಾಗಿ ಅವುಗಳು ತನ್ನ ತೇಜಸ್ಸು, ಅಂತಃಸತ್ವವನ್ನು ಕಳೆದುಕೊಂಡು ಕಳಾಹೀನಗೊಂಡಿರುವುದೇ ಇದಕ್ಕೆ ಪ್ರಮುಖ ಸಾಕ್ಷಿಯಾಗಿದೆ.[೮] ಅಷ್ಟೇಅಲ್ಲ; ಇಂದಿಗೂ ಅಲ್ಲಿ ಮುಸಲ್ಮಾನ ಜನಸಂಖ್ಯೆಯೇ ಅಧಿಕವಾಗಿದ್ದು, ಉಳಿದ ಮತೀಯ ಸಂಖ್ಯೆ ಕೇವಲ ಬೆರಳೆಣಿಕೆಯಷ್ಟು ಮಾತ್ರ ಉಳಿದುಕೊಂಡಿದೆ.

ಆರಂಭಕಾಲದಲ್ಲಿ "ಬಾಡ"ದಲ್ಲಿಯೇ ಆದಿಕೇಶವನ ದೇವಾಲಯವಿದ್ದಿತು. ಆದರೆ ಮುಸ್ಲಿಮರ ದಾಳಿ–ಆಕ್ರಮಣಗಳಿಂದ ರಕ್ಷಿಸುವ ಸಲುವಾಗಿ ಕನಕದಾಸರು "ಬಾಡ"ದಿಂದ ಆದಿಕೇಶವನ ಪ್ರತಿಮೆಯನ್ನು ತಂದು

ಕಾಗಿನೆಲೆಯಲ್ಲಿ ವ್ಯಾಸರಾಜರಿಂದ ಪ್ರತಿಷ್ಠಾಪಿಸಿದರು.[೯] "ಕಾಗಿನೆಲೆ ಆದಿಕೇಶವ" ಅಂಕಿತದಿಂದಲೇ ನೂರಾರು ಕೃತಿಗಳನ್ನು ರಚಿಸಿ ತಮ್ಮ ಆರಾಧ್ಯದೈವನಿಗೆ ಅವುಗಳನ್ನು ಸಮರ್ಪಿಸಿದ್ದಾರೆ.

ಆದರೆ "ಬಾಡ"ದಲ್ಲಿ ಆದಿಕೇಶವ ಪ್ರತಿಮೆ ಇರುವವರೆಗೂ ಕನಕನಾಯಕರಾಗಿದ್ದ ಇವರು "ಬಾಡದಾಸ", "ಬಾಡದಾದಿಕೇಶವ"–ಇತ್ಯಾದಿ ಅಂಕಿತದಿಂದ ಕೃತಿಗಳನ್ನು ರಚಿಸಿ ಭಕ್ತಿಯಿಂದ ಹಾಡುತ್ತಿದ್ದರು.[೧೦] ಮತ್ತು ಆ ಸಂದರ್ಭದಲ್ಲಿ ಅವರು ದೊರೆಯಾಗಿ ದೊರೆತನವನ್ನು ಅನುಭವಿಸಿದ ವಿಚಾರ ಅವರ ಕೀರ್ತನೆಗಳಿಂದಲೇ ತಿಳಿದುಬರುತ್ತದೆ.

'॥ ಸ್ವಾರಿ ಹೊರಟರೆ ಛತ್ರ ಭೇರಿಯು ನಗಾರಿಗಳು
ಭೋರೆಂಬ ಹೊಂಗಹಳೆ
ಧೀರ ರಾಹುತ ರಾಣ್ಯ ಪರಿವಾರಲಂಕಾರ
ಭಾರವನು ತೆಗೆದೊಗೆದೆ ಹರಿಯೆ ॥'

– ಹೀಗೆ ಅವರು ಬಾಡದಲ್ಲಿ ಅಧಿರಾಜನೊಬ್ಬನ ಮನ್ನೆಯನಾಗಿ ಆಳಿದ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ೧೧ ಆದ್ದರಿಂದ "ಬಾಡ"ದಲ್ಲಿ ಆದಿಕೇಶವನ ಸನ್ನಿಧಿಯಲ್ಲಿ ಇವರು ದೊರೆತನವನ್ನು ಅನುಭವಿಸಿದ್ದು, ನಂತರ ಹರಿದಾಸರಾದ ಮೇಲೆ ಬಹುಶಃ ಪ್ರತಿಮೆಯನ್ನು ಕಾಗಿನೆಲೆಯಲ್ಲಿ ತಂದು ಪ್ರತಿಷ್ಠಾಪಿಸಿರುವ ವಿಚಾರ ತಿಳಿದು ಬರುತ್ತದೆ.

*** ** ***

**✣ ✲ ✣ ಅಡಿಟಿಪ್ಪಣಿಗಳು ✣ ✲ ✣**

೧. **ಪ್ರೊ॥ ವಸಂತಕುಷ್ಟಗಿ "ದಾಸಸಾಹಿತ್ಯದ ತವನಿಧಿಯಲ್ಲಿ", ಪು.೧೫೭**
೨. **ಡಾ॥ ಎನ್.ಕೆ.ರಾಮಶೇಷನ್ "ಹರಿದಾಸ ಆಂದೋಲನ", ಪು.೧೯೩**
೩. **ಬೇಲೂರು ಕೇಶವದಾಸರು "ಕರ್ನಾಟಕ ಭಕ್ತಿ ವಿಜಯ", ಪು.೩೯೫**
೪. **ಬನ್ನಂಜೆಗೋವಿಂದಾಚಾರ್ಯ "ಕನಕೋಪನಿಷತ್ತು", ಪು.೮**
೫. **---"--- ಅದೇ**
೬. **ಡಾ॥ ಎನ್.ಕೆ.ರಾಮಶೇಷನ್ "ಹರಿದಾಸ ಆಂದೋಲನ", ಪು.೧೯೪**
೭. **ರಂ.ಶ್ರೀ.ಮುಗುಳಿ "ಕಸಾಚ", ಪು.೧೬೧**
೮. **ಟಿ.ಎನ್. ನಾಗರತ್ನ "ಕನಕದಾಸ", ಭಾರತೀಯ ಸಾಹಿತ್ಯ ನಿರ್ಮಾಪಕರು, ಪು.೧೭**
೯. **---"--- ಅದೇ**
೧೦. **ಡಾ॥ ಎನ್.ಕೆ.ರಾಮಶೇಷನ್ "ಹರಿದಾಸ ಆಂದೋಲನ", ಪು.೧೯೪**
೧೧. **"ಶ್ರೀಕನಕದಾಸರ ಭಕ್ತಿಗೀತೆಗಳು" ಮುನ್ನುಡಿ ಪು.೮**

*** ** ***

## ಉ) ಮತ

ಕನಕದಾಸರ ಕಾಲ, ಸ್ಥಳಗಳಿಗೆ ಸಂಬಂಧಪಟ್ಟಂತೆ ವಿದ್ವಾಂಸರುಗಳಲ್ಲಿ ಭಿನ್ನಾಭಿಪ್ರಾಯವಿರುವಂತೆಯೇ ಅವರ ಜಾತಿ, ಕುಲಗಳ ಬಗೆಗೂ ಪಂಡಿತರಲ್ಲಿ ಅನೇಕ ರೀತಿಯ ಗೊಂದಲಗಳಿವೆ. ಸದ್ಯಕ್ಕೆ ಕುರುಬ, ಬೇಡ, ಕಬ್ಬಲಿಗ, ಆದಿಬಣಜಿಗ ಎಂಬ ನಾಲ್ಕು ಜಾತಿಗಳು ಅವರ ಹೆಸರಿನೊಂದಿಗೆ ತಳಕುಗೊಂಡಿವೆ.[೧]

"ನಾಯಕ" ಎನ್ನುವ ಅಡ್ಡ ಹೆಸರೇ ಅವರು ಬೇಡರ ಜನಾಂಗದವರು ಎನ್ನುವ ಊಹೆಗೆ ಕಾರಣವಿದೆ. ಏಕೆಂದರೆ ಈ ಜನಾಂಗದಲ್ಲಿ "ನಾಯಕ" ಎನ್ನುವ ಪದ ಈಗಲೂ ಬಳಕೆಯಲ್ಲಿದೆ. ಮತ್ತೊಂದು ವಾದದ ಪ್ರಕಾರ, "ಕನಕನಾಯಕ" ಎಂಬುದು ಆತನು ಸೇನಾನಾಯಕನಾದ್ದರಿಂದ ಬಂದ ಹೆಸರೇ ಹೊರತು ಕುಲದ ಅಡ್ಡ ಹೆಸರಲ್ಲ.[೨] ಇನ್ನು, ಕನಕದಾಸರು "ಕುರುಬರು" ಎನ್ನುವುದಕ್ಕೆ ಅವರದೇ ಆದ ಕೆಲವು ಕೀರ್ತನೆಗಳು ಸಾಕ್ಷಿಯಾಗಿವೆ.

"ನಾವು ಕುರುಬರು ನಮ್ಮ ದ್ಯಾವರು ಬೀರಪ್ಪ", "ದ್ಯಾವಿ ನಮ್ಮ ದ್ಯಾವರು ಬಂದವ್ರೆ ಬನ್ನಿರೆ ನೋಡ ಬನ್ನಿರೇ", "ಕುಲವಿಲ್ಲದ ದಾಸ ಕುರುಬ ದಾಸ" – ಇತ್ಯಾದಿ. ಮತ್ತೊಂದು ಪ್ರಮುಖ ಅಂಶವೆಂದರೆ;

'॥ ನಾರದರ ಅಂಶವೆ ಪುರಂದರದಾಸರು ನಾ ಯಮನು ಮುಂದೆ ।
ಮಾಂಡವ್ಯ ಶಾಪದಿಂದ ಎರಡು ಜನ್ಮ ಶೂದ್ರಯೋನಿಯಲ್ಲಿ ಪೊಕ್ಕೆನು ।
ಒಂದು ಜನುಮ ವಿದುರನಾಗಿ ಕುರುಬರ ಕುಲದಲ್ಲೀಗ ಪುಟ್ಟಿದೆ ।
ಎನಗೆ ಈ ಜನ್ಮದಲಿ ಮುಕುತಿ ಎಂತೆಂಬೆ ॥'

ಬಹುಶಃ ಕುಲ, ಮತಗಳ ಬಗೆಗೆ ಅವರದೇ ಉಲ್ಲೇಖ ಇಷ್ಟೊಂದು ಸ್ಪಷ್ಟವಾಗಿರುವಾಗ ಅವರು "ಕುರುಬ"ರೆಂದು ಪರಿಗಣಿಸಬಹುದು. ಇದು ಭೌತಿಕ, ಲೌಕಿಕ ಪ್ರಪಂಚಕ್ಕಾಗಿ. ಆದರೆ ವಾಸ್ತವವಾಗಿ ಅವರು ಮನುಜ–ಕುಲಕ್ಕೆ ಸೇರಿದ್ದು, ವಿಶ್ವಮಾನವರಾಗಿದ್ದಾರೆ. ಡಾ॥ ದೇ.ಜವರೇಗೌಡರ ಮಾತಂತೂ ಇಲ್ಲಿ ಬಹಳ ಮನನೀಯವಾಗಿದೆ. ಕನಕದಾಸರು ತೀರಿಕೊಂಡು ಸುಮಾರು ವರ್ಷಗಳೇ ಕಳೆದಿದ್ದರೂ ಅವರು ತಮ್ಮವರು, ತಮ್ಮವರೆಂದು ಕುರುಬರು, ನಾಯಕರು ಇತರರೆಲ್ಲರೂ ಹೇಳಿಕೊಳ್ಳುತ್ತಿರುವುದು ಹೆಮ್ಮೆಯ ವಿಷಯವೇ ಆಗಿದೆ.

ಸಾಮಾಜಿಕ ಕಳಕಳಿಯೊಂದಿಗೆ ದಾಸಸಾಹಿತ್ಯವನ್ನು ಶ್ರೀಮಂತಗೊಳಿಸಿದ ಕನಕದಾಸರ ಕುಲ, ಮತಗಳ ಬಗೆಗೆ ಹಲವಾರು ಗೊಂದಲ ಮತ್ತು ಕತೆಗಳಿಗೆ ಎಡೆಮಾಡಿಕೊಟ್ಟಿದೆ. ಆದ್ದರಿಂದ ಶೂದ್ರರು, ಬ್ರಾಹ್ಮಣರು ಎಂಬ ಜಾತಿ ವಾದಗಳಿಂದ ಹೊರಬಂದು ಅವರ ಸಾಹಿತ್ಯ ಚಿಂತನೆಯಲ್ಲಿ ತೊಡಗಬೇಕಾಗಿದೆ. ಎಲ್ಲಾ ಜಾತಿ, ಮತ–ಪಂಥಗಳನ್ನೂ ಮೀರಿ ನಿಂತ ಪರಮಹರಿಭಕ್ತ, ಸಂತರು ಇವರು.

'॥ ಯಾತರ ಕುಲದವನೆಂದು ಉಸುರಲಿ ಶ್ರೀ

ನಾಥ ಮಾಡಿದನೊಂದು ನರರೂಪವಯ್ಯಾ ॥'[೨]

–ಎಂದು ಬಹು ವಿಷಾದದಿಂದ ನೊಂದು ನುಡಿದಿರುವುದನ್ನು ಅವರ ಕೃತಿಯಲ್ಲೇ ನಾವು ಕಾಣಬಹುದಾಗಿದೆ.

ಭರತಖಂಡದಲ್ಲಿ ವೇದಗಳ ಕಾಲದಿಂದಲೂ ಜಾರಿಯಲ್ಲಿದ್ದ ವರ್ಣಾಶ್ರಮಗಳು ಕನಕದಾಸರ ಕಾಲಕ್ಕಾಗಲೇ ಆಳವಾಗಿ ಬೇರೂರಿದ್ದು ಅದು ಬಲವಾದ ಹೆಮ್ಮರದಂತೆ ಬೆಳೆದು ಹಬ್ಬಿ ನಿಂತಿತ್ತು. ಜಾತಿ–ಕುಲಗಳ ಹಿನ್ನೆಲೆಯಲ್ಲಿ ಮನುಷ್ಯರ ಗೌರವಯುತ ಸ್ಥಾನ–ಮಾನಗಳನ್ನು ನಿರ್ಧರಿಸಲಾಗುತ್ತಿತ್ತು.

'॥ ಕುಲ ಕುಲ ಕುಲವೆಂದು ಹೊಡೆದಾಡದಿರಿ

ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ ॥'[೩]

ವ್ಯಾಸರಾಯರ ಶಿಷ್ಯತ್ವ ವಹಿಸಿದ ನಂತರ ಶ್ರೇಷ್ಠ ಕುಲವಂತರು ತಾವೇ ಎಂದು ನಂಬಿದ್ದ ಕೆಲವು ಮಡಿ ಶಿಷ್ಯರು ಕನಕದಾಸನನ್ನು ನೀನು ಯಾವ ಕುಲ ? ಎಂದು ಕೇಳಿದಾಗ ನೊಂದ ಮನಸ್ಸಿನಿಂದ ಕೊಟ್ಟ ಉತ್ತರವೇ ಈ ಕೀರ್ತನೆಯಾಗಿದೆ. ಹಾಗೆಯೇ,

'॥ ಕುಲ ಕುಲ ಕುಲ ಎನ್ನುತಿಹರು

ಕುಲ ಯಾವುದು ಸತ್ಯವುಳ್ಳ ಜನರಿಗೆ ॥'[೫]

ಮೇಲು–ಕೀಳು ಎಂದು ಭೇದ ಕಲ್ಪಿಸುತ್ತಾ ಹಾರಾಡುತ್ತಿದ್ದ ಮೌಢ್ಯಾಂಧರ ಕಿರುಕುಳ ಸಹಿಸಲು ಅಸಾಧ್ಯವಾದಾಗ ಅಂತಹವರ ಕಣ್ಣು ತೆರೆಸಲು ಈ ಕೀರ್ತನೆ ರಚಿಸಿದ್ದಾರೆ.

'॥ ಕಾಗಿನೆಲೆಯಾದಿಕೇಶವ ತಾನೊಲಿದ ಮೇಲೆ ಯಾತರ ಕುಲವಯ್ಯಾ? ॥' ಎನ್ನವುದು ಅವರು ಸಮಾಜ–ಕ್ಕೊಡಿದ ತಮ್ಮ ಮನಸ್ಸಿನೊಳಡಗಿದ್ದ ಪ್ರಶ್ನೆಯಾಗಿದೆ.

ಕನಕದಾಸರದು ಯಾವ ಮತ ? ಯಾವ ಪಂಥಕ್ಕೆ ಸೇರಿದವರು ಎಂದು ಚಿಂತಿಸುವುದಕ್ಕಿಂತ, "ಅವರು ಎಲ್ಲಾ ಮತ–ತತ್ತ್ವಗಳನ್ನೂ ಮೀರಿದ ದೇವತಾ ಪುರುಷರು" – ಎನ್ನುವ ಸತ್ಯವನ್ನು ಅರಿತುಕೊಳ್ಳಬೇಕು. ತಮ್ಮ ಹುಟ್ಟೂರಾದ "ಬಾಡ"ದಲ್ಲಿದ್ದಾಗ "ಬಾಡದಾದಿಕೇಶವ" ಎಂದೂ, ಕಾಗಿನೆಲೆಯಲ್ಲಿ ತಾವು ವಾಸವಾಗಿದ್ದಾಗ "ಕಾಗಿನಿಲೆಯಾದಿಕೇಶವ" ಎಂದೂ, ಹಾಗೂ ಅವರು ಕೆಲವು ಕಾಲ ಬೇಲೂರು ವೈಕುಂಠದಾಸರ ಜೊತೆಗೆ ವಾಸವಾಗಿದ್ದಾಗ "ಬೇಲೂರು ಚೆನ್ನಕೇಶವ" – ಅಂಕಿತಗಳನ್ನು ನಮೂದಿಸಿರುವುದನ್ನು ನಾವು ಕಾಣುತ್ತೇವೆ. ಅಂತೆಯೇ, ರಾಮಾನುಜರ ಪರಂಪರೆಯ "ತಾತಾಚಾರಿಯರಿಗೆರಗುವೆ"[೬] ಎಂದೂ ಮತ್ತು ಆಚಾರ್ಯ ರಾಮಾನುಜರನ್ನು 'ರಾಮಾನುಜರೇ ನಮೋ ನಮೋ । ಸ್ವಾಮಿ ಲಕ್ಷ್ಮಣರೂಪ ನಮೊ ನಮೋ ॥'[೭] ಎಂದು ಭಕ್ತಿಯಿಂದ ಸ್ಮರಿಸಿದ್ದಾರೆ.

"ಕಾಲಮಾನದ ಒಂದು ಸಂಪ್ರದಾಯದ ಜಡತೆ ಅವರ ಭಾಗವತ ಧರ್ಮದಲ್ಲಿಯೂ ಸೇರಿರುವುದು ಸ್ವಾಭಾವಿಕವಾಗಿದ್ದರೂ, ಅವರು ಕಾಲ, ದೇಶ, ಮತ–ತತ್ವಗಳನ್ನು ಮೀರಿದ ದೇವಜೀವಿಗಳು, ಸರ್ವಸಮದರ್ಶಿಗಳು"[೮]–

ಇಂತಹ ಸಂದರ್ಭದಲ್ಲಿ ವಿಶಿಷ್ಟಾದ್ವೈತದ ಹಿರಿಮೆ ಅಲ್ಲಲ್ಲಿ ಇಣುಕಿದಂತಿದ್ದರೂ ಕೂಡಾ ಆ ಮತದ ಬಗೆಗೆ ಕನಕದಾಸರ ಮನದೊಳಗೆ ಅಡಗಿದ್ದ ಅಸಮಾಧಾನವನ್ನು ನಾವು ಈ ಕೀರ್ತನೆಯ ಮೂಲಕ ತಿಳಿದುಕೊಳ್ಳಬಹುದಾಗಿದೆ.

'॥ತೀರ್ಥ ಪಿಡಿದವರೆಲ್ಲ ತಿರುನಾಮಧಾರಿಗಳೆ-ಜನ್ಮ ಸಾರ್ಥಕವಿಲ್ಲದವರೆಲ್ಲ ಭಾಗವತರೆ ॥[೯]- ಎನ್ನುವಲ್ಲಿ ದಾಸರ ವೈಯಕ್ತಿಯ ಅಭಿಪ್ರಾಯ ಅಭಿವ್ಯಕ್ತಿಗೊಂಡಿರುವುದನ್ನು ನಾವು ಕಾಣುತ್ತೇವೆ. ಹೀಗಿರುವಾಗ ಆ ಮತದ ಗುರುಗಳು ಕನಕದರಿಗೆ ದೀಕ್ಷೆ ನೀಡಿದರೆ ?, ಅಂಕಿತವನ್ನು ದಾಸರು ಅವರಿಂದ ಪಡೆದರೆ ?- ಎನ್ನುವ ಪ್ರಶ್ನೆಗಳು ನಮ್ಮನ್ನು ಕಾಡುವುದುಂಟು ! ಆದರೆ, ಇದೇರೀತಿ, ಕನಕದಾಸರು ಮಧ್ವಪರಂಪರೆಯ ಮತ ತತ್ತ್ವಗಳನ್ನು ತಮ್ಮ ದೇವತಾಸ್ತಿತಿ ಕೃತಿಗಳಲ್ಲಿ ಹಾಡಿದ್ದಾರೆ. ಮಧ್ವಮತ ತತ್ತ್ವದಂತೆ ತಾರತಮ್ಯಸ್ತುತಿ ರಚಿಸಿಲ್ಲವಾದರೂ; ಹರಿಸರ್ವೋತ್ತಮತ್ತ್ವದ ಪ್ರತಿಪಾದನೆ ಮಾಡಿದ್ದಾರೆ. ಈ ಎರಡೂ ಅಂಶಗಳಿಂದ ನಾವು ತಿಳಿದುಕೊಳ್ಳಬಹುದಾದ ವಿಚಾರವೆಂದರೆ; "ವೈಷ್ಣವ ಪಂಥದ ಹರಿಭಕ್ತರು ಇವರು."- ಎಂದು. ಹಾಗೆಯೇ, ಮಧ್ವಮತ ಪರಂಪರೆಯ ಗುರುಗಳಿಂದಲೂ ಇವರಿಗೆ ದೀಕ್ಷೆ, ಅಂಕಿತಗಳು ದೊರಕಿರುವುದು ಸಂಶಯದ ವಿಷಯವೇ ಆಗಿದೆ. ಏಕೆಂದರೆ; "ವೈದಿಕ ಧರ್ಮದ ತಿರುಳಾದ ವರ್ಣಾಶ್ರಮ ಧರ್ಮವನ್ನು ಪರಿಶುದ್ಧವಾದ ವಿಷ್ಣುಭಕ್ತಿಯ ತಳಹದಿಯ ಮೇಲೆ ನಿಲ್ಲಿಸಿದವರು ದ್ವೈತ ಸಿದ್ಧಾಂತ ಪ್ರತಿಪಾದಕರಾದ ಶ್ರೀಮಧ್ವಾಚಾರ್ಯರು.[೧೦] ಅಂದಮೇಲೆ ಹುಟ್ಟಿನಿಂದ ಶೂದ್ರರಾದ ಕನಕರಿಗೆ ಮಧ್ವಸಿದ್ಧಾಂತದ ಹರಿದೀಕ್ಷೆ, ಮಂತ್ರದ ಉಪದೇಶ, ಅಂಕಿತಗಳು ದೊರೆಯುವುದು ಕನಸಿನ ಮಾತು. ಆದ್ದರಿಂದ ಕನಕನಿಗೆ ದೊರೆತ ದೀಕ್ಷೆ ಕೇವಲ "ಏಕಲವ್ಯನ ಗುರುಭಕ್ತಿಯಂತೆ". ಏಕೆಂದರೆ, "ಕನಕನ ಮೇಲೆ ದಯಮಾಡಲು ವ್ಯಾಸಮುನಿ" ಎಂಬ ಪುರಂದರರ ಕೃತಿ ಅಂದಿನ ಕಾಲದಲ್ಲಿದ್ದ ಕೆಲವು ಮತಾಂಧರನ್ನು ಗುರ್ತಿಸಿತ್ತದೆ.[೧೧] ವ್ಯಾಸರಾಜರಿಂದ ಮಧ್ವ ತತ್ತ್ವಜ್ಞಾನ ಇವರ ಮೇಲೆ ಹೇಗೆ ಮತ್ತು ಎಷ್ಟು ಪರಿಣಾಮಕಾರಿಯಾಗಿ ಪ್ರಭಾವ ಬೀರಿತ್ತೆಂದರೆ;

"॥ ಮಧ್ಯಗೇಹದಾತನಾ ಸತಿಯಲ್ಲಿ ಉದಿಸಿದವಗೆ । ಬೌದ್ಧ-ಚಾರ್ವಾಕ-ಮಾಯಿಗಳ ಜರಿದವಗೆ ।

ಮಧ್ವಶಾಸ್ತ್ರವನೆಲ್ಲ ಸಜ್ಜನರಿಗೆ ಒರೆದವಗೆ ॥"[೧೨] ಎಂದು ಹಾಡಿದ್ದಾರೆ.

ಒಟ್ಟಾರೆ, ಕನಕದಾಸರ ಮತ-ಪಂಥ ಯಾವುದೇ ಆಗಿರಲಿ, ಅವರು ಯಾವುದಕ್ಕೇ ಸೇರಿರಲಿ, ಅವರದು "ಭಕ್ತಿಪಂಥ" ಎನ್ನುವುದನ್ನು ಮಾತ್ರ ನಾವು ಮರೆಯದಿದ್ದರೆ ಸಾಕು. ಹರಿಭಕ್ತರು, ಹರಿದಾಸರಾದ್ದರಿಂದ ಅವರು ವಿಶೇಷವಾಗಿ ಮಾಧ್ವಪರಂಪರೆಯ ಹರಿದಾಸರ ಸಾಲಿನಲ್ಲಿ ಗುರ್ತಿಸಿಕೊಂಡಿದ್ದಾರೆ.

*** ** ***

## ✣ ✳ ✣ ಅಡಿಟಿಪ್ಪಣಿಗಳು ✣ ✳ ✣

೧. "ಶ್ರೀಕನಕದಾಸರ ಭಕ್ತಿಗೀತೆಗಳು" ಮುನ್ನುಡಿ ಪು.೮
೨. ---"--- ಅದೇ
೩. "ಸದಾಸಾ" ಸಂ.೫, ಭಾ.೧, ಪು.೧೮೯, ಪ್ರೊ॥ ಸುಧಾಕರ (ಸಂ), ಕನ್ನಡ ಮತ್ತು ಸಂಸ್ಕೃತಿ ದೇಶನಾಲಯ ಪ್ರಕಟಣೆ
೪. --"--- ಅದೇ ಪು.೧೯೦
೫. --"--- ಅದೇ ಪು.೨೦೧.
೬. ಡಾ. ಎನ್. ಕೆ. ರಾಮಶೇಷನ್, "ಹರಿದಾಸ ಆಂದೋಲನ", ಪು.೧೯೪
೭. ಡಾ. ಎನ್. ಕೆ. ರಾಮಶೇಷನ್, "ಹರಿದಾಸ ಆಂದೋಲನ", ಪು.೧೯೫
೮. ರಂ.ಶ್ರೀ.ಮುಗುಳಿ, "ತನವಿಧಿ", ಪು.೬೧
೯. "ಕಸಾದ", ಪು.೧೯೨, ಪದ್ಯ-೨೦೪
೧೦. ಆರ್.ಎಸ್. ಪಂಚಮುಖಿ, "ಕರ್ನಾಟಕ ಹರಿದಾಸ ಸಾಹಿತ್ಯ"
೧೧. ಡಾ. ಎನ್. ಕೆ. ರಾಮಶೇಷನ್, "ಹರಿದಾಸ ಆಂದೋಲನ", ಪು.೧೯೬
೧೨. ಕನಕದಾಸರ ಭಕ್ತಿಗೀತೆಗಳು

✳✳✳ ✳✳ ✳✳✳

## ಅಧ್ಯಾಯ - ೧: ಪ್ರವೇಶ

ಕನಕದಾಸರದು ವಿಶಿಷ್ಟ ಜೀವನ. ವೈವಿಧ್ಯಮಯ ಸಾಹಿತ್ಯ. ತಾತ್ವಿಕ ಹೋರಾಟ. ಆಧ್ಯಾತ್ಮಿಕ ಪರಂಪರೆಯಲ್ಲಿ ಬಂದ ಧಾರ್ಮಿಕ ಸಂಸ್ಕೃತಿಯಲ್ಲಿ ಕನಕದಾಸರು ಸಾಮಾಜಿಕವಾಗಿ ಮಾನವೀಯ ತಾತ್ವಿಕ ಮೌಲ್ಯಗಳನ್ನು ಹುಡುಕತೊಡಗಿದಂತಹ ಸಮಾಜಮುಖಿ ದಾಸವರೇಣ್ಯರು.

ಮಾನವನ ಸಂಸ್ಕೃತಿಯ ಅಧ್ಯಯನಕ್ಕೆ ಸಂಬಂಧಿಸಿದ್ದು "ಸಾಂಸ್ಕೃತಿಕ ಮಾನವಶಾಸ್ತ್ರ". "ಸಂಸ್ಕೃತಿ" ಕಲಿಕೆಯ ಮುಖಾಂತರ ಲಭಿಸುವಂತಹದ್ದು. ಇದು ಅಖಂಡವಾದುದು, ಸಾಂಕೇತಿಕವಾದುದು, ಪರಿವರ್ತನಶೀಲವಾದುದು ಮತ್ತು ಬಹಳ ಮುಖ್ಯವಾಗಿ ಇದು ಸಾಮಾಜಿಕವಾದುದು. ಅದರ ವಿಶೇಷ ಗುಣ ಮಾನವನ ಅಗತ್ಯಗಳ ನೆರವೇರಿಕೆಗೆ ಸಹಾಯಕವಾಗುವುದು. ಮಾನವನ ಸಾಮಾಜಿಕ ಪರಂಪರೆಯೆಂದರೆ "ಸಂಸ್ಕೃತಿ."[೧] ಆತ್ಮದ ಹಾಗೂ ಶರೀರದ ಅಗತ್ಯಗಳನ್ನು ಪೂರೈಸುವುದು ಸಂಸ್ಕೃತಿಯ ಕಾರ್ಯವಾಗಿದೆ.[೨]

ಸಾಂಸ್ಕೃತಿಕ ಆಯಾಮಗಳು ಅಂದಾಗ ನಾವು ಮೊದಲು "ಸಂಸ್ಕೃತಿ" ಶಬ್ದದ ಅರ್ಥವನ್ನು ಸ್ಪಷ್ಟಪಡಿಸಿಕೊಳ್ಳಬೇಕು. ಹಾಗೂ ವೈಜ್ಞಾನಿಕವಾಗಿ ವಿಶ್ಲೇಷಿಸಿಕೊಳ್ಳಬೇಕು. ವಿಶಿಷ್ಟ ಸಮಾಜವೊಂದರ ಸದಸ್ಯರು ಪಾಲ್ಗೊಂಡು ವಂಶಪಾರಂಪರ್ಯವಾಗಿ ಸಾಗಿಸುವ ಜ್ಞಾನ, ಮನೋಭಾವಗಳು ಮತ್ತು ರೂಢಿಯಾದ ವರ್ತನಾ ರೂಪಿಕೆಗಳ ಒಟ್ಟು ಮೊತ್ತವೇ "ಸಂಸ್ಕೃತಿ" ಎಂದು ರಾಲ್ಫಲಿಂಟನ್ ಹೇಳುತ್ತಾನೆ.[೩] ಮಾನವಶಾಸ್ತ್ರಜ್ಞರ ಪ್ರಕಾರ "ಸಂಸ್ಕೃತಿ" ಎಂದರೆ, ಒಂದು ಜನಾಂಗದ ಸಮಗ್ರ ಜೀವನ ವಿಧಾನ.

ವ್ಯಕ್ತಿಯು ತನ್ನ ಗುಂಪಿನಿಂದ ಅರ್ಜಿಸುವ ಸಾಮಾಜಿಕ ಪರಂಪರೆ ಅಥವಾ ಸಂಸ್ಕೃತಿಯನ್ನು ಮಾನವ ನಿರ್ಮಿತ ಪರಿಸರ ಭಾಗವೆಂದೂ ಪರಿಗಣಿಸಬಹುದು. "ಸಂಸ್ಕೃತಿ"ಯನ್ನು ಒಂದು ಅನುಕೂಲವಾದ ಅಮೂರ್ತಭಾವನೆಯಾಗಿದೆ. "ಸಂಸ್ಕೃತಿ"ಯನ್ನು ನೋಡಲು ಯಾರಿಂದಲೂ ಸಾಧ್ಯವಾಗಲಾರದು. ಒಂದು ಸಂಪ್ರದಾಯವನ್ನು ಪಾಲಿಸುತ್ತಿರುವ ಒಂದು ಗುಂಪಿನ ನಡವಳಿಕೆ ಅಥವಾ ಮಾನವ ನಿರ್ಮಿತ ವಸ್ತುಗಳಲ್ಲಿನ ಪ್ರಬುದ್ಧತೆಯನ್ನು ಮಾತ್ರ ನೋಡಬಹುದು.[೪]

"ಸಂಸ್ಕೃತಿ" ವೈಯಕ್ತಿಕವಾದುದಲ್ಲ. ಸಮಾಜದಲ್ಲಿರುವ ಪ್ರತಿಯೊಬ್ಬ ವ್ಯಕ್ತಿಯೂ ಮುಂದಿನ ಪೀಳಿಗೆಗೆ ಸಂಸ್ಕೃತಿಯನ್ನು ಸಾಗಿಸುವ ಮತ್ತು ಸಂಪರ್ಕ ಕಲ್ಪಿಸುವ ಕಾರ್ಯದಲ್ಲಿ ಭಾಗವಹಿಸುತ್ತಾನೆ. ಈ ದೃಷ್ಟಿಯಿಂದ ನೋಡಿದಾಗ ಕನಕದಾಸರು ಒಬ್ಬ ಅದ್ಭುತ ಮಹಾನ್ ಮಾನವಶಾಸ್ತ್ರಜ್ಞರಾಗಿಯೂ ಸಮಕಾಲೀನ ಸಮಾಜದಲ್ಲಿ ಅವಿರತವಾಗಿ

ಶ್ರಮಿಸಿರುವುದನ್ನು ನಾವು ಕಾಣುತ್ತೇವೆ. ಅವರು ಕೇವಲ ಮಾನವನ ಭಕ್ತಿ, ಮುಕ್ತಿ, ಮೋಕ್ಷದ ಬಗೆಗಷ್ಟೇ ವಿಚಾರಿಸದೆ; ಕೆಳಸ್ತರದ ಸಮಾಜದ ಅದರಲ್ಲೂ ದಲಿತ ಸಮಾಜದಲ್ಲಿ ಉಲ್ಬವಣಾವಸ್ಥೆಗೇರಿದ್ದ ಮೂಢನಂಬಿಕೆ ಇತ್ಯಾದಿ ಸಂಸ್ಕೃತಿಗಳ ಬಗೆಗೂ ಗಾಢವಾಗಿ ವಿಚಾರ ಮಾಡುತ್ತಾರೆ. ಏಕೆಂದರೆ, "ಸಂಸ್ಕೃತಿ" ಎಂದು ಕರೆಯಲ್ಪಡುವ ಸಂಪ್ರದಾಯವು ಯಾವುದಾದರೊಂದು ಸಮೂಹದ ಸಾಮಾಜಿಕ ಜೀವನದಲ್ಲೇ ಆಗಲಿ ಬಹು ಮುಖ್ಯ ವಿಷಯವಾಗಿ ಪರಿಣಮಿಸುತ್ತದೆ.[೫]

ಸಮಾಜಬೋಧೆ ಮಾಡುವ ಕನಕದಾಸರು ಅದರ ಬಗೆಗೆ ಇರಿಸಿಕೊಂಡ ಗಾಢವಾದ ಅವಿನಾಭಾವ ಸಂಬಂಧ ಅನನ್ಯವೆನಿಸುತ್ತದೆ.[೬]

ಸಮಾಜಶಾಸ್ತ್ರದ ಪ್ರಕಾರ, "ಸಂಸ್ಕೃತಿ" ಎಂದರೆ, ಒಂದು ಜನಾಂಗದ ಸಮಗ್ರ ಜೀವನ ವಿಧಾನ.[೭]

ಆದರೆ, ಹೀಗೆ ಸಾಮಾಜಿಕ ಜೀವನ, ಸಾಮೂಹಿಕ ಒಡನಾಟ, ಸಾಮಾಜಿಕ ನಡವಳಿಕೆಯ ಅಧ್ಯಯನವೆಂದು "ಸಮಾಜಶಾಸ್ತ್ರ"ದ ವ್ಯಾಖ್ಯೆ.[೮]

ಬಹಳ ಪ್ರಾಚೀನಕಾಲದಿಂದಲೂ ರೂಢಿ, ಪ್ರಚಲಿತದಲ್ಲಿರುವ ಪದ "ವಿಜ್ಞಾನ". "ವಿಜ್ಞಾನ" ಎಂದರೆ, "ಅರಿವು" ಎಂದರ್ಥ. ಈ "ಅರಿವು" ಅಥವಾ "ತಿಳವಳಿಕೆ" ಕನಕದಾಸರಿಗೆ ಯಥೇಚ್ಛವಾಗಿ, ಸೂಕ್ಷ್ಮವಾಗಿಯೂ ಇದ್ದುದರಿಂದಲೇ ಮತ್ತು ಅದರ ಸಹಾಯದಿಂದಲೇ ಅವರು ಸಮಾಜದಲ್ಲಿನ ಮೂಢನಂಬಿಕೆಗಳು, ತಪ್ಪು ತಿಳವಳಿಕೆಗಳನ್ನು ಕಂಡು ಹಿಡಿದು ಅವುಗಳನ್ನು ಸರಿಪಡಿಸಲು ನಿರಂತರವಾಗಿ ಶ್ರಮಿಸಿದರು. "ವಿಜ್ಞಾನದ ಮಹತ್ವ ಅರಿವಿನ ಮಹತ್ವದಲ್ಲಿ ಅಡಗಿದೆ."[೯]

ಆದ್ದರಿಂದ ವಿಜ್ಞಾನಕ್ಕೆ "ಚಿಂತನೆ" ಬಹಳ ಅವಶ್ಯಕ. "ವಿಜ್ಞಾನ"ದ ಉದ್ದೇಶವೇ "ಅರಿವು" ಅಥವಾ "ತಿಳವಳಿಕೆ"ಯನ್ನು ಸಂಪಾದಿಸುವುದು.

"ಸಮಾಜಶಾಸ್ತ್ರ"ದಲ್ಲಿ ವರ್ಣನೆ ಮುಖ್ಯವಲ್ಲ. ಕಾರಣಗಳ ಶೋಧನೆ ಮತ್ತವುಗಳ ವಿವರಣೆಯೇ ಮುಖ್ಯ.[೧೦]

ಸಾಮಾಜಿಕ ಮಾನವಶಾಸ್ತ್ರವು ತುಲನಾತ್ಮಕ ಸಮಾಜಶಾಸ್ತ್ರವೆಂದು ಇವಾನ್ಸ್‌ಪ್ರಿಚರ್ಡ್ ಅಭಿಪ್ರಾಯಪಡುತ್ತಾನೆ.[೧೧]

ಈತನ ಈ ಅಭಿಪ್ರಾಯವನ್ನು ದೃಷ್ಟಿಯಲ್ಲಿಟ್ಟುಕೊಂಡು ನೋಡಿದರೆ ಕನಕದಾಸರೂ ಹಾಗೆ ಅದೇ ರೀತಿಯಲ್ಲಿಯೇ ತಮ್ಮ ಕಾಲದ ಸಮಾಜವನ್ನು ತುಲನಾತ್ಮಕವಾಗಿಯೇ ನೋಡಿರುವಷ್ಟು ವಿಶ್ವಸನೀಯವಾಗಿ ಅವರ ಕೃತಿಗಳಿಂದ ನಮಗೆ ತಿಳಿದುಬರುತ್ತದೆ.

ಕನಕದಾಸರು ಅಂದು ಕಂಡ ಸಮಾಜದ ದೃಷ್ಟಿಯಲ್ಲಿ; ಅದು ಶಾಸ್ತ್ರೀಯ ಅಥವಾ ವೈಜ್ಞಾನಿಕ ದೃಷ್ಟಿಯಾಗಿರಲಿ ಅಥವಾ ಇಲ್ಲದಿರಲಿ ಅಥವಾ ಉದ್ದೇಶಪೂರ್ವಕವಾಗಿ ಆ ದೃಷ್ಟಿಯಿಂದ ನೋಡಿಲ್ಲದಿರಲೂಬಹುದು ಆದರೆ ಒಟ್ಟಾರೆ, ಅವರು ಕಂಡ ಅಂದಿನ ಕಾಲದ ಸಮಾಜವನ್ನು ನಾವು ಇಂದಿನ ಸಮಾಜಶಾಸ್ತ್ರದ ಅಧ್ಯಯನಕ್ಕೆ ಒಳಪಡಿಸಿ ನೋಡಿದರೆ ಅವರ ಅಂದಿನ ಕಾಲದಲ್ಲಿ ತಾವು ಹೊಂದಿದ್ದಂತಹ ಅಭೂತಪೂರ್ವ ಮತ್ತು ಅದ್ಭುತವಾದಂತಹ ದೂರದೃಷ್ಟಿತ್ವವನ್ನು ನಾವು ಗುರ್ತಿಸಬಹುದಾಗಿದೆ.

"ಸಂಸ್ಕೃತಿ"ಯು ಸಮಾಜಜೀವಿಯಾಗಿ ಮಾನವ ಪಡೆಯುವ ಜ್ಞಾನ, ನಂಬಿಕೆ, ಕಲಿಯುವ ಕಲೆ, ನೀತಿಗಳು, ನಿಯಮಗಳು, ಕಾನೂನು, ಪದ್ಧತಿ ಹಾಗೂ ಸಾಮರ್ಥ್ಯಗಳು ಮತ್ತು ಅಭ್ಯಾಸವನ್ನೊಳಗೊಂಡ ಸಮಗ್ರಮಿಶ್ರಣ ಎಂದು ಇ.ಬಿ.ಟೈಲರ್ ಹೇಳಿರುವಂತೆ; ಈ ಸಂಪ್ರಬಂಧದಲ್ಲಿ,

೧) ಸಾಮಾಜಿಕ

೨) ಐತಿಹಾಸಿಕ

೩) ಧಾರ್ಮಿಕ ಮತ್ತು ಸಾಂಸ್ಕೃತಿಕ ನೆಲೆಗಳನ್ನು ಕನಕದಾಸರ ಸಮಾಜಮುಖಿ ಕೀರ್ತನೆಗಳ ದೃಷ್ಟಿಯಿಂದ ಅಧ್ಯಯನ ಮಾಡಿ ಮೌಲ್ಯಮಾಪನ ಮಾಡಲಾಗಿದೆ.

*** ** ***

## ✣ ⁂ ✣ ಅಡಿಟಿಪ್ಪಣಿಗಳು ✣ ⁂ ✣

೧. ಡಿ. ಎಚ್. ಮಲ್ಲಿನಾಥಯ್ಯ "ಸಾಂಸ್ಕೃತಿಕ ಮಾನವಶಾಸ್ತ್ರ", ಪು.೨೧
೨. --- ಅದೇ---, ಪು.೨೪
೩. --- ಅದೇ---, ಪು.೧೮
೪. --------ಅದೇ--------
೫. ----- ಅದೇ-----, ಪು.೨೨
೬. ಡಿ.ಎಚ್. ಮಲ್ಲಿನಾಥಯ್ಯ "ಸಮಾಜಶಾಸ್ತ್ರ ಕೈಪಿಡಿ", ಪು.೧
೭. ----ಅದೇ-----, ಪು.೧೩
೮. ----ಅದೇ-----, ಪು.೨೬
೯. ----ಅದೇ----, ಪು.೧
೧೦. --- ಅದೇ---, ಪು.೨೬
೧೧. ಡಾ.ಕೆ.ಜಿ. ಗುರುಮೂರ್ತಿ. "ಮಾನವಶಾಸ್ತ್ರ", ಪು.೧೮

*** ** ***

## ಅ) ಕನಕದಾಸರ ವಿಶಿಷ್ಟತೆ

ಕನಕದಾಸರು ಮೂಢಸಂಪ್ರದಾಯಗಳ ವಿರೋಧಿಯಾಗಿದ್ದರು. ಆದರೆ ಸಂಪ್ರದಾಯವಿರೋಧಿಯಾಗಿರಲಿಲ್ಲ. ಕಂದಾಚಾರಗಳ ವಿರೋಧಿಯಾಗಿದ್ದರು. ಆದರೆ ಆಚಾರವಿರೋಧಿಯಾಗಿರಲಿಲ್ಲ. ಎಲ್ಲಾ ಸಂಪ್ರದಾಯವಾದಿಗಳೂ ಮೂಢಸಂಪ್ರದಾಯಗಳನ್ನು ವಿರೋಧಿಸುತ್ತಾರೆ. ಅಂತೆಯೇ ಕನಕದಾಸರೂ ಕೂಡಾ ಇದೇ ದಾರಿಯಲ್ಲೇ ಸಾಗಿದವರಾಗಿದ್ದಾರೆ. ಇದಕ್ಕೆ ನಿದರ್ಶನ ಎನ್ನುವಂತೆ ಇವರ ಕೀರ್ತನೆಗಳಲ್ಲಿ ನೈತಿಕಪ್ರಜ್ಞೆಗೆ, "ಸುಳ್ಳು ಹೇಳಬೇಡ, ಕಳವು ಮಾಡಬೇಡ, ಪರಧನ-ಪರಸ್ತ್ರೀಯರಿಗೆ ಆಸೆ ಪಡಬೇಡ, ಹೆಚ್ಚಿನದನ್ನು ಬಯಸಬೇಡ, ಪಡೆದದ್ದೆಲ್ಲ ಪೂರ್ವಜನ್ಮದ ಕರ್ಮಫಲ, ಹರಿಯನ್ನು ಆರಾಧಿಸುವ ಮೋಕ್ಷವನ್ನು ಬಯಸು"[೧] ಇತ್ಯಾದಿ ಉಪದೇಶಗಳನ್ನು ನಾವು ಯಥೇಚ್ಛವಾಗಿಯೇ ಕಾಣುತ್ತೇವೆ. ಅಂತೆಯೇ, ಕನಕದಾಸರು ಸಂಪ್ರದಾಯ, ಸಂಸ್ಕೃತಿಗಳ ಚೌಕಟ್ಟಿನೊಳಗೇ ಅವರು ಸಮಾಜದಲ್ಲಿದ್ದಂತಹ ಲೋಪ-ದೋಷಗಳನ್ನು ತಿದ್ದಿದರು. ಇಂತಹ ಅಮೂಲ್ಯ ಮಾನವತಾವಾದಿಯ ಸಂಪ್ರದಾಯವಾದರೂ ಯಾವುದು? ಅವರ ವಿಶಿಷ್ಟವಾದ ಜೀವನಶೈಲಿ ಮತ್ತು ವಿಧಾನ, ತಾತ್ವಿಕ ನಿಲುವು-ನಂಬಿಕೆಗಳನ್ನೆಲ್ಲಾ ಅವರು ರಚಿಸಿದಂತಹ ಸಾಮಾಜಿಕ ಕೀರ್ತನೆಗಳ ಮೂಲಕವೇ ತಿಳಿದುಕೊಳ್ಳುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಕನಕದಾಸರ ಕೀರ್ತನೆಗಳು ಅವರ ಬದುಕಿನ ವೈಯಕ್ತಿಕ ಅಂಶಗಳನ್ನು ಮೊದಲುಗೊಂಡು ಒಟ್ಟು ಸಮಾಜದ ಇತರ ಎಲ್ಲ ಸ್ತರಗಳ ಪಾರ್ಶ್ವಗಳೆಲ್ಲದರ ಶೋಧನೆಗೆ ತೊಡಗುವ ಮತ್ತು ಸಂಸ್ಕರಿಸುವ ಮಹತ್ವಾಕಾಂಕ್ಷೆಯನ್ನು ಪ್ರದರ್ಶಿಸುತ್ತದೆ.[೨]

ಕೀರ್ತನೆ"ಗಳಲ್ಲಿ ಸಾಮಾಜಿಕ ದೋಷಗಳೇ ಮುಂದಾಗಿ ಟೀಕೆ, ವಿಡಂಬನೆ, ಉಪದೇಶರೂಪದಲ್ಲಿ ನಿಲ್ಲುತ್ತದೆ. ಸಮಾಜದ ಮೇಲು-ಕೀಳು, ಬಡವ-ಬಲ್ಲಿದ, ಉಚ್ಚ-ನೀಚ... ಇತ್ಯಾದಿಯಾಗಿ ಎಲ್ಲ ವರ್ಗಗಳ, ಮತಗಳ, ತಳಬುಡಗಳನ್ನೆಲ್ಲ ಸೋಸಿ ನೋಡಿದ್ದಾರೆ. ಮೇಲುವರ್ಗದವರ ಮತಾಂಧತೆ, ಅಹಂಕಾರ, ಪ್ರತಿಷ್ಠೆ, ಡಾಂಭಿಕತೆಯಂಥ ಪ್ರವೃತ್ತಿಗಳು ಕೆಳವರ್ಗದವರ ಅಜ್ಞಾನ, ಅಂಧಶ್ರದ್ಧೆ, ಮೌಢ್ಯಗಳಂಥ ಅನಿಷ್ಟಗಳು ಅವರ ಕೀರ್ತನೆಯ ವಿಷಯ-ವಸ್ತುಗಳಾಗುತ್ತವೆ.[೩]

"ಕೀರ್ತನೆ" ಎಂಬ ನಿರ್ದಿಷ್ಟ ಪ್ರಕಾರಕ್ಕೆ ಖಚಿತವಾದ ಒಂದು ರೂಪವಿನ್ಯಾಸವಿದೆ. ಸಾಮಾನ್ಯವಾಗಿ ಕೀರ್ತನೆ ದೈವಸ್ತುತಿಯಾಗಿರುತ್ತದೆ. ಹಾಡಿಕೆಯೇ ಅದರ ಮುಖ್ಯ ಉದ್ದೇಶವಾದುದರಿಂದ ವಿಸ್ತಾರ ಕಡಿಮೆಯಿರುತ್ತದೆ.

ಸಾಮಾನ್ಯವಾಗಿ ಮೂರು, ಐದು, ಏಳು, ಒಂಭತ್ತು..... ಹೀಗೆ ನುಡಿಗಳಿರುತ್ತವೆ. ಇದಕ್ಕೆ ಮೊದಲು ಪಲ್ಲವಿ, ಅನುಪಲ್ಲವಿ ಭಾಗಗಳಿರುತ್ತವೆ. ಘನೀಭೂತವಾದ ಭಾವವೊಂದು ಪಲ್ಲವಿಯಲ್ಲಿ ಕಟ್ಟಿಕೊಳ್ಳುತ್ತದೆ. ಅನುಪಲ್ಲವಿ ಅದನ್ನು ಪೋಷಿಸುತ್ತದೆ. ಮುಂದಿನ ನುಡಿಗಳು ಇದನ್ನು ಸೋದಾಹರಣವಾಗಿ ಸಮರ್ಥಿಸುತ್ತದೆ.[೪]

ನೆಲದ ಬದುಕಿನ- ಭಾಷೆಯ ದ್ರವ್ಯದಿಂದಲೇ ಸೃಷ್ಟಿಸಿಕೊಳ್ಳುವ ಉಪಮೆ, ದೃಷ್ಟಾಂತ, ರೂಪಕ ಮತ್ತು ನಾಣ್ಣುಡಿಗಳು ಕೃತಿಯ ರಕ್ತವಾಹಿನಿಗಳಾಗಿ ಇಡೀ ಕೀರ್ತನೆಗೆ ಸಾಮಾಜಿಕ ಪ್ರಜ್ಞೆಯ ಜೀವಧಾತುವನ್ನು ಪೂರೈಸುತ್ತದೆ.[೫]

ಕನಕದಾಸರು ತಮ್ಮೆಲ್ಲಾ ಈ ಉದ್ದೇಶ ಸಾಧನೆಗಳಿಗಾಗಿ ನಿರ್ದಿಷ್ಟ ಸಾಹಿತ್ಯ ಪ್ರಕಾರವಾದ ಈ "ಕೀರ್ತನೆ"ಯನ್ನೇ ಏತಕ್ಕಾಗಿ ಆಯ್ಕೆ ಮಾಡಿಕೊಂಡರು? ಎಂಬ ಪ್ರಶ್ನೆ ನಮ್ಮಲ್ಲಿ ಮೂಡುವುದು ಸಹಜ. ಅದಕ್ಕೂ ಕೆಲವು ಪ್ರಮುಖ ಕಾರಣಗಳಿವೆ. ಮತ್ತು ಅವುಗಳ ಬಗೆಗೆ ಇಲ್ಲಿ ಯಥಾಶಕ್ತಿ ಚರ್ಚಿಸಲಾಗಿದೆ.

ಅಂದಿನ ಕಾಲದ ವಿಜಯನಗರ ಸಾಮ್ರಾಜ್ಯದ ಸಂಸ್ಕೃತಿಯು ಕನ್ನಡ, ತೆಲುಗು, ತಮಿಳು, ಸಂಸ್ಕೃತ ಹಾಗೂ ಇತ್ಯಾದಿ ಭಾಷೆಗಳ ಸಾಹಿತ್ಯರೂಪದಲ್ಲಿ ಪ್ರದರ್ಶಿತಗೊಂಡಿರುವುದನ್ನು ನಾವು ಕಾಣುತ್ತೇವೆ. ಈ ಸಾಮ್ರಾಜ್ಯದ ಅರಸರುಗಳ ಆಳ್ವಿಕೆಯ ಕಾಲದಲ್ಲಿ ಎಷ್ಟೇ ಭಾಷೆ, ಮತೀಯ ಸ್ವಾತಂತ್ರ್ಯಗಳಿದ್ದರೂ; ರಾಜರುಗಳು ಪರಮತ ಸಹಿಷ್ಣುಗಳೇ ಆಗಿದ್ದರೂ ಪರಸ್ಪರ ಮತ-ಪಂಗಡಗಳ ನಡುವೆ ಪೈಪೋಟಿ, ಸಂಕುಚಿತ ದೃಷ್ಟಿಗಳು ಇದ್ದೇ ಇತ್ತು. ಇದಕ್ಕೆ ನಿದರ್ಶನವಾಗಿ ನಾವು ಇತಿಹಾಸದಿಂದ; ಮಠಾಧೀಶರುಗಳು ಅವರವರ ಮಠದ ಶ್ರೇಷ್ಠತೆ ಸಾರುವುದರಲ್ಲಿ ಅಚಲವಾದ ಶ್ರದ್ಧೆವಹಿಸಿರುವುದನ್ನು ಕಾಣುತ್ತೇವೆ. "ಸಂಗಮ" ವಂಶದ ಕಾಲದಲ್ಲಿ ಶೈವ ಮತವು ರಾಜವಂಶದ ಮತವಾಗಿದ್ದರೆ, "ಸಾಳ್ವ" ವಂಶವು ದ್ವೈತ ಮತಕ್ಕೆ ಸ್ಥಾನ ಕಲ್ಪಿಸಿಕೊಟ್ಟಿದ್ದರೆ, "ತುಳುವ" ವಂಶವು ವಿಶಿಷ್ಟಾದ್ವೈತವು ರಾಜವಂಶಿಕರ ಮತವಾಗಿರುವುದನ್ನು ತಿಳಿಯುತ್ತೇವೆ. ಇದಕ್ಕಿಂತಲೂ ಹೆಚ್ಚಾಗಿ ಈ ಕಾಲದಲ್ಲಿ ಅತೀ ಪ್ರಮುಖವಾದ ವಿಷಯವೆಂದರೆ, "ಸಂಸ್ಕೃತ"ವು "ದೇವಭಾಷೆ" ಎಂಬ ಗೌರವಕ್ಕೆ ಪಾತ್ರವಾಗಿತ್ತು. ಪರಿಣಾಮವಾಗಿ ಮತ ಜಿಜ್ಞಾಸೆಗೆ ಸಂಬಂಧಪಟ್ಟ ಕೃತಿಗಳೆಲ್ಲವೂ ಸಂಸ್ಕೃತದಲ್ಲಿಯೇ ರಚನೆಯಾಗುತ್ತಿತ್ತು. ಜೊತೆಗೆ ಸ್ವತಃ ಶ್ರೀಕೃಷ್ಣದೇವರಾಯನೇ ಕನ್ನಡಿಗನಾಗಿದ್ದನು, ಕವಿಯಾಗಿದ್ದನು. ಆದರೂ ಈತನು ಸಂಸ್ಕೃತ, ತೆಲುಗು ಭಾಷೆಗಳ ಕೃತಿಗಳನ್ನು ರಚಿಸಿರುವುದನ್ನು ಕಾಣುತ್ತೇವೇಯೇ ಹೊರತು ಕನ್ನಡ ಭಾಷೆಯ ಕೃತಿಯನ್ನಲ್ಲ. ಅದರಲ್ಲೂ ತೆಲುಗು ಭಾಷೆ ಕೃತಿಯಾದರೂ ಸಂಸ್ಕೃತ ಭೂಯಿಷ್ಠಭಾಷೆ, ಪದಪ್ರಯೋಗ, ನಿರೂಪಣಾ ಶೈಲಿ ಪ್ರಧಾನವಾಗಿರುವುದು ನಮಗೆ ಕಂಡುಬರುತ್ತವೆ. ಅಂದರೆ ಕನ್ನಡ ಭಾಷೆಯನ್ನು ಬಿಟ್ಟು ಉಳಿದ ಭಾಷೆಗಳ ಪ್ರಭಾವವೇ ಅಂದಿನ ಕಾಲದ ಸಮಾಜದಲ್ಲಿರುವುದನ್ನು ಅತೀ ಸುಲಭವಾಗಿ ನಾವು ತಿಳಿದುಕೊಳ್ಳಬಹುದಾಗಿದೆ. ಇದಕ್ಕೆ ಕಾರಣ ಅನೇಕ ಮತಗಳು ಅಂದು ಅಸ್ತಿತ್ವದಲ್ಲಿದ್ದುದು ಮತ್ತು ಅವುಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವುದಕ್ಕಾಗಿ ಮತ್ತು ರಕ್ಷಿಸಿಕೊಳ್ಳಲು ನಡೆಸುತ್ತಿದ್ದಂತಹ ಪ್ರಚಾರ ಕಾರ್ಯಗಳು ಇತ್ಯಾದಿ. ಈ ನಡುವೆ ಮತ ಜಿಜ್ಞಾಸೆಯಲ್ಲಿ ತೀವ್ರವಾದ ಗುಣಾಗುಣಗಳ ಪರಿಶೀಲನೆ, ಶೋಧನೆಗಳ ಜೊತೆಗೆ ಪ್ರಚಾರವೂ ಅತೀ ಹೆಚ್ಚು ಹೆಚ್ಚು ನಡೆಯತೊಡಗಿತ್ತು. ಪ್ರಚಾರದ ಉದ್ದೇಶ, ವಿಮರ್ಶೆಯ ದೃಷ್ಟಿಯಿಂದ ಸಂಸ್ಕೃತ ಭಾಷೆಯ ಆಧ್ಯಾತ್ಮಿಕ ಶಾಸ್ತ್ರಗ್ರಂಥಗಳು ಹುಟ್ಟಿಕೊಂಡವು. ಹೀಗಾಗಿ "ಭಾರತೀಯ ಸಾಹಿತ್ಯ" ಎಂದರೆ, ಕೇವಲ ಮತ ಧರ್ಮಗಳ ಭಾಗವೇ ಅಧಿಕ ಪ್ರಧಾನ ಪಾತ್ರವಹಿಸಿರುವುದು ನಮಗೆ ಈ ಮೂಲಕ ತಿಳಿದುಬರುತ್ತದೆ.

ಪ್ರಾರಂಭದಲ್ಲಿ ಈ ಎಲ್ಲಾ ಮತಗಳೂ ಮತಸ್ಥಾಪಕರೆಲ್ಲರೂ ತಂತಮ್ಮ ಸಾಹಿತ್ಯದ ಮೂಲಕ ಜನರನ್ನು ತಮ್ಮ ಮತಕ್ಕೇ ಸೇರಿಸಿಕೊಳ್ಳುವ ಪ್ರಯತ್ನಗಳು ನಮಗೆ ತಿಳಿದಿರುವ ವಿಚಾರವೇ ಆಗಿದೆ. ಇದಕ್ಕಾಗಿ ಅವರು ಜನರ ಒಪ್ಪಿಗೆ, ಮೆಚ್ಚುಗೆಗಳನ್ನು ಗಳಿಸಲು ತಂತಮ್ಮ ಮತ ತತ್ತ್ವಗಳನ್ನು ಆದಷ್ಟೂ ಸುಲಭ ರೀತಿಯಲ್ಲಿ ಸಾರಲು ಆರಂಭಿಸಿದರು. ಹೀಗಾಗಿ ಅವರು ರಚಿಸಿದ ಸಾಹಿತ್ಯಕ್ಕೆ ಸರಳತೆ, ನೈಜತೆಗಳು ದೊರಕಿದವು. ಆದರೆ ಇದಕ್ಕೂ ಮೊದಲು ಕನ್ನಡ ಸಾಹಿತ್ಯವು ಸಂಸ್ಕೃತ ಭೂಯಿಷ್ಠವಾದ ಭಾಷೆ, ವೃತ್ತಗಳು–ಛಂದೋಬಂಧಗಳಿಂದಾಗಿ ಕಬ್ಬಿಣದ ಕಡಲೆಯಾಗಿತ್ತು. ಪಂಡಿತರಿಗೆ ಹೊರತಾಗಿ ಸಾಮಾನ್ಯ ಜನರಿಗೆ ಅರ್ಥವಾಗುತ್ತಿರಲಿಲ್ಲ. ಈ ಸಂದರ್ಭದಲ್ಲಿ ವೀರಶೈವ ಮತವು ಕ್ರಿ.ಶ.೧೧೫೬ರಲ್ಲಿ ಬಿಜ್ಜಳರಾಜನ ಕಾಲದಲ್ಲಿ ಸ್ಥಾಪನೆಗೊಂಡಿತು. ಮೂಲದಲ್ಲಿ ಬಸವೇಶ್ವರರು ಶೈವರೇ ಆಗಿದ್ದು, ಶೈವಸಿದ್ಧಾಂತವನ್ನೇ ಅನುಸರಿಸುತ್ತಿದ್ದುದರಿಂದ ಇದು ಶೈವಮತದ ಒಂದು ಅಂಗವೇ ಆಗಿರುವಂತಿದೆ.[೬] ವಿಜಯನಗರ ಸಾಮ್ರಾಜ್ಯದ ಅಂದಿನ ಅರಸನಾಗಿದ್ದ ಪ್ರೌಢದೇವರಾಯನು ವೀರಶೈವ ಮತಕ್ಕೆ ಪೋಷಣೆ ನೀಡಿದನಷ್ಟೇ ಅಲ್ಲದೆ, ತನ್ನ ಮಗಳನ್ನು ಕೆಳಸ್ತರದ ವೀರಣ್ಣನಿಗೆ ಕೊಟ್ಟು ವಿವಾಹ ಮಾಡಿದನು. [೭]

ಇತ್ತಕಡೆ ಶ್ರೀರಾಮಾನುಜರ ಶ್ರೀವೈಷ್ಣವ ಮತವು ವೇದಾಂತ ದೇಶಿಕರ ಮಹಿಮೆಯಿಂದ ಅತ್ಯುನ್ನತ ಕೀರ್ತಿ ಪಡೆಯಿತು. ದೇಶಿಕರು ಪರಮತ ಸಹಿಷ್ಣುಗಳಾಗಿದ್ದರು. ಮಲ್ಲಿಕಾಫರನು ದಕ್ಷಿಣಭಾರತವನ್ನು ಆಕ್ರಮಿಸಿ ಅಲ್ಲಿನ ದೇವಾಲಯಗಳನ್ನೆಲ್ಲಾ ಕೊಳ್ಳೆಹೊಡೆದು, ಹಾಳುಮಾಡಲು ಬಂದಾಗ ದೇಶಿಕರು ಮಧುರೆಯ ದೇವಾಲಯದಲ್ಲಿದ್ದಂತಹ ಮೀನಾಕ್ಷಿ ಅಮ್ಮನವರ ವಿಗ್ರಹವನ್ನು ಕೇರಳದಲ್ಲಿ ಬಚ್ಚಿಟ್ಟಿದ್ದು, ಮುಸಲ್ಮಾನರ ಹಾವಳಿ ಕಡಿಮೆಯಾದ ನಂತರ ಕೇರಳದಿಂದ ಪುನಃ ಪ್ರತಿಮೆಯನ್ನು ತಂದು ಪುನರ್ ಪ್ರತಿಷ್ಠೆ ಮಾಡಿದರು. ಶೈವ ಮತದ ದೇವಾಲಯ, ಪ್ರತಿಮೆಯಾದರೂ ಅಂದು ಆ ಸಂದರ್ಭದಲ್ಲಿ ದೇಶಿಕರು ತೋರಿದ ಪರಮತಸಹಿಷ್ಣು ಗುಣ, ಅಭಿಮಾನಗಳು ಬಹು ಪ್ರಶಂಸನೀಯವಾದುದಾಗಿದೆ.[೮]

ಮತ್ತು ಆ ಸಮಯದಲ್ಲಿದ್ದಂತಹ ಅದ್ವೈತ ಮತಾಚಾರ್ಯರ ಶಿಷ್ಯ ಪರಂಪರೆಗೆ ಸೇರಿದ ಶೃಂಗೇರಿ ಮಠದ ಸ್ವಾಮಿಗಳು– ಇತರರೆಲ್ಲರೂ ಘನ ಪಂಡಿತರು, ಜ್ಞಾನಿಗಳೇ ಆಗಿದ್ದರು. ಹಾಗೂ ಹಂಪೆಯ ಶ್ರೀವಿರೂಪಾಕ್ಷನು ವಿಜಯನಗರ ಸಾಮ್ರಾಜ್ಯದ ಆರಾಧ್ಯದೈವನಾಗಿದ್ದು, ಅರಮನೆಯವರೆಲ್ಲರೂ ಶೈವಮತಾವಲಂಬಿಗಳಾಗಿದ್ದುದ್ದು ತಿಳಿದುಬರುತ್ತದೆ. ಆದರೆ ಆನಂತರ ಶ್ರೀರಾಮಾನುಜರ ಪ್ರಭಾವ– ಪ್ರೇರಣೆಗಳಿಂದಾಗಿ ಶ್ರೀವೈಷ್ಣವ ಮತವನ್ನು ಹೊಂದಿದರು. ಆದರೆ ಮತ್ತೂ ಸ್ವಲ್ಪ ಕಾಲದ ನಂತರ; ಶ್ರೀಮಧ್ವಾಚಾರ್ಯ ಶಿಷ್ಯಪರಂಪರೆಯಲ್ಲಿ ಬಂದಂತಹ ಶ್ರೀಪಾದರಾಜರು, ಶ್ರೀವ್ಯಾಸರಾಜರು ಸಾಳ್ವ ಮತ್ತು ತುಳುವ ವಂಶದ ರಾಜರಿಗೆ ರಾಜಗುರುಗಳಾಗಿದ್ದ ನಂತರವೂ ಕೂಡಾ ಮಧ್ವಮತವನ್ನೇ ಅನುಸರಿಸುತ್ತಾ, ಅದಕ್ಕೇ ಹೆಚ್ಚು ಮನ್ನಣೆ ಕೊಟ್ಟಿರುವುದು ನಮಗೆ ತಿಳಿದುಬರುತ್ತದೆ. ಒಟ್ಟಾರೆ, ಈ ಎಲ್ಲಾ ಮತಗಳೂ ರಾಜಾಶ್ರಯಕ್ಕಾಗಿ ಹಂಬಲಿಸುತ್ತಾ; ಕೆಲವು ಸಂದರ್ಭಗಳಲ್ಲಿ ಪರಮತ ಖಂಡನೆಗಳು ನಡೆಯುತ್ತಿದ್ದರೂ, ಇಂತಹ ಕಲಹಗಳು ಸಾರ್ವಜನಿಕವಾಗಿ ಬಹಿರಂಗರೂಪ ಪಡೆದಿರುವುದೆಲ್ಲೂ ಈ ಕಾಲದ ಇತಿಹಾಸದಲ್ಲಿ ನಮಗೆ ಕಂಡುಬರುವುದಿಲ್ಲ. ಬಾರ್ಬೋಸಾ ಮತ್ತು ಪೇಸ್ ಮೊದಲಾದವರು ಈ ಮತೀಯ ಸಹನೆಯನ್ನು ಬಹಳ ಕೊಂಡಾಡಿದ್ದಾರೆ.[೯] ಮತ್ತು ಇಂತಹ ಸಹನಾಗುಣವೇ ಅಂದಿನ ಸಾಹಿತ್ಯದ ಏಳಿಗೆಗೂ ಪ್ರಮುಖ ಕಾರಣ ಎಂದಿದ್ದಾರೆ.

"ಮಾರ್ಗ ಸಾಹಿತ್ಯ" ಎಂದೇ ಪ್ರಾಶಸ್ತ್ಯ ಪಡೆದ ಸಂಸ್ಕೃತ ಸಾಹಿತ್ಯದಂತೆಯೇ ವಿಜಯನಗರ ಸಾಮ್ರಾಜ್ಯದ ಅಂದಿನ ಕಾಲದಲ್ಲಿ ಕನ್ನಡ ಸಾಹಿತ್ಯವೂ ಶುದ್ಧ ಮತ್ತು ಶಾಸ್ತ್ರೀಯ ಸಾಹಿತ್ಯಗಳು ಬಹಳ ವ್ಯವಸಾಯ ನಡೆಸಿವೆ. ಆದರೆ ವೀರಶೈವ ಮತವು "ವಚನ ಸಾಹಿತ್ಯ" ಎಂಬ "ದೇಸೀಸಾಹಿತ್ಯ ಮಾರ್ಗ"ವನ್ನು ಕನ್ನಡ ಭಾಷೆಯಲ್ಲಿ ಒದಗಿಸಿಕೊಟ್ಟಿತು. ಆದರೆ ಕಲ್ಯಾಣ ಕರ್ನಾಟಕ ರಾಜ್ಯವು ಪತನ ಹೊಂದಿದ ಮೇಲೆ ವೀರಶೈವರು ಚದುರಿಹೋದರು. ಆಗಿನಿಂದೀಚೆಗೆ ನಿಜವಾದ ಭಕ್ತಿಯು ತಾಂತ್ರಿಕ ಕ್ರಮಕ್ಕೆ ಇಳಿಮುಖವಾಯಿರು. ಆಗ ನಿರ್ಗುಣೋಪಾಸಕರಾಗಿ ದೇವಾಲಯದ ನಿರ್ಮಾ-ಣಗಳಿಗೆ ನಿಷೇಧವಿದ್ದುದರಿಂದ ಬಸವಣ್ಣ ಮೊದಲಾದವರ ಆಲಯಗಳನ್ನು ನಿರ್ಮಿಸಲು ವೀರಶೈವರು ಉದ್ಯುಕ್ತರಾದರು.[೧೦]

ಕ್ರಿ.ಶ. ೧೦ನೇ ಶತಮಾನದ ಆದಿಕವಿ, ಮಾರ್ಗಕವಿ ಎಂದೇ ಪ್ರಖ್ಯಾತನಾದ ಪಂಪನ "ವಿಕ್ರಮಾರ್ಜುನ ವಿಜಯ" ಹೇಗೆ ವಸ್ತುನಿಷ್ಠ ಗಂಭೀರ ಕಾವ್ಯ ಎನಿಸಿಕೊಂಡಿದೆಯೋ ಹಾಗೆಯೇ ಅದೇ ರೀತಿ, ಕ್ರಿ.ಶ.೧೫ನೇ ಶತಮಾನದ "ಗದುಗಿನಭಾರತ"ವೂ ಕನ್ನಡ ಸಾಹಿತ್ಯದಲ್ಲಿ ಶ್ರೇಷ್ಠಸ್ಥಾನ ಪಡೆದುಕೊಂಡಿದೆ. ಈ ಸಮಯದಲ್ಲಿ ಇತರ ಕವಿಗಳು ರಚಿಸಿದ ರಗಳೆ ಮತ್ತು ಶತಕ, ಸಾಂಗತ್ಯಗಳು ಸಂಗೀತಕ್ಕೆ ಅನುಗುಣವಾಗಿ ವರ್ತಿಸುತ್ತಿದ್ದರೂ; ಹ್ರಸ್ವ ಮತ್ತು ದೀರ್ಘ ಸ್ವರಗಳ ಬಳಕೆ ಸರಿಯಾಗಿ ಆಗದೆ, ಅದು ನೈಜತೆಯನ್ನು ಕಳಕೊಂಡಂತಾಗಿ ಶೋಭಿಸಲು ಅಸಾಧ್ಯವಾಯಿತು. ಇನ್ನು ಶಿವಶರಣರ ವಚನಗಳನ್ನೂ ಗದ್ಯದ ರೀತಿಯಲ್ಲೇ ಹೇಳಿದರೂ ಕೇಳಲು ಅದೆಷ್ಟೋ ಮುದ್ದಾಗಿರುತ್ತದೆ, ಹಿತವಾಗಿರುತ್ತದೆ. ಆದರೆ, ಇಂತಹ ಸೊಗಸಾದ, ಸರಳವಾದ ಈ ಸಾಹಿತ್ಯವನ್ನು ಸಂಗೀತಕ್ಕೆ ಅಳವಡಿಸಿ ಹಾಡುವಾಗ ಅದು ತನ್ನ ಸ್ವರೂಪವನ್ನೇ ಹಾಳುಮಾಡಿಕೊಂಡಂತಾಗುತ್ತಿತ್ತು.[೧೧]

ಆದರೆ, ಕೋಲಾಟ, ಲಾವಣಿ, ತತ್ವಪದಗಳು ಇತ್ಯಾದಿ ಕವಿಯ ಸಿದ್ಧತೆ, ಲೋಕಾನುಭವ, ವಯಾಸಂಗ, ವಿವಿಧ ಕಾವ್ಯ ಹಾಗೂ ಜ್ಞಾನ ಕ್ಷೇತ್ರಗಳ ಪರಿಚಯ, ಪುರಾಣಪ್ರಜ್ಞೆ, ಭಾಷಾಸಂಪತ್ತು ಕನಕದಾಸರ ಶೈಲಿಯೇ ಕೀರ್ತನೆಗೆ ಸಂವಾದಿಯಾದ ಅಭಿವ್ಯಕ್ತಿ.[೧೨] ಕಾರಣ ಅದು ಶೈಲಿ ಮತ್ತು ಕವಿಯ ಅನುಭವ ವ್ಯಕ್ತಗೊಳ್ಳುವ ಒಂದು ವಾಹಕ. ಅದರ ಅಂತರಂಗದ ವಕ್ರತಾ ಮನೋರೂಪದ ಬಹಿರ್ ರೂಪ. ಹೀಗೆ ಕುಂತಕ ಕಾವ್ಯ ಭಾಷೆಗೆ ವೈಯಕ್ತಿಕತೆಯನ್ನು ತಂದುಕೊಟ್ಟು ನಾವಿಂದು ಹೇಳುವ ಪಂಪನ ಶೈಲಿ, ಕುಮಾರವ್ಯಾಸನ ಶೈಲಿ, ಕುವೆಂಪು ಶೈಲಿ ಎಂದು ವಿಶಿಷ್ಟವಾಗಿ ಗುರುತಿಸುವ ಪರಿಕಲ್ಪನೆಗೆ ಸಾಮೀಪ್ಯವನ್ನು ಹೊಂದುತ್ತಾನೆ.[೧೩] ಅಷ್ಟೇಅಲ್ಲ, ಕನಕದಾಸರ ಚಿಂತನೆಯ ವಿಧಾನವೂ ಹಾಗೇ ಇದೆ. ಕವಿ ಮನೋಧರ್ಮ ಹಾಗೂ ಆತನ ಪ್ರತಿಭೆಗನುಗುಣವಾಗಿ ಮಾರ್ಗ ರೂಪಗೊಳ್ಳುತ್ತದೆ, [೧೪] ಎನ್ನುವ ಕುಂತಕನ ಆಲೋಚನೆಯ ಹಿನ್ನೆಲೆಯಲ್ಲಿಯೂ ಕನಕದಾಸರ ಕೀರ್ತನೆಗಳ ಸಂವಹನ ಮೂರ್ತಗೊಂಡಿರುವುದು ಸ್ವಯಂವೇದ್ಯ.

ಸಮಾಜದಲ್ಲಿ ಜನರ ನೀಚ ಪ್ರವೃತ್ತಿಯನ್ನು ಅಳಿಸಿ ಹಾಕಿ ಅವರನ್ನು ಸನ್ಮಾರ್ಗದತ್ತ ನಡೆಸಲು ಸಾಹಿತ್ಯ-ಸಂಗೀತಗಳ ಗುರಿಯನ್ನು ಕನಕದಾಸರು ಹೊಂದಿದ್ದರು. ಅದಲ್ಲದೆ ಕೇವಲ ಬಾಯಿ ಉಪಚಾರದ ಆಡು ಮಾತಾಗಲೀ, ಸ್ವೇಚ್ಛಾ ರೂಪದ ರಚನೆಗಳಾಗಲೀ, ಸ್ವೇಚ್ಛಾ ಪ್ರವೃತ್ತಿಯಿಂದಾಗಲೀ, ಜನರನ್ನು ಸನ್ಮಾರ್ಗದತ್ತ ನಡೆಸಲು ಸಾಧ್ಯವೂ ಇಲ್ಲ ಮತ್ತು ಅದು ಅಷ್ಟೊಂದು ಪರಿಣಾಮಕಾರಿ ರೀತಿಯಲ್ಲಿ ಕೆಲಸವಾಗುತ್ತಲೂ ಇರಲಿಲ್ಲ. ಈ ಅಂಶವನ್ನು

ಕನಕದಾಸರು ಬಹಳ ಚೆನ್ನಾಗಿ ಮನಗಂಡಿದ್ದರು. ಹಾಗೂ "ತತ್ತ್ವ"ಎನ್ನುವುದು ಅಚಲವೂ, ದೃಢತ್ವ ಹೊಂದಿರುವಂತಹದ್ದು. ಅದಕ್ಕೆ ಪ್ರಾಚೀನತೆಯಾಗಲಿ, ನವೀನತೆಯಾಗಲಿ ಇರುವುದಿಲ್ಲ. ದಾಸರ ಕೀರ್ತನೆಗಳನ್ನು ಬಿಟ್ಟರೆ ಉಳಿದ ರಚನೆಗಳು ಬಹುಶಃ ಅಷ್ಟೊಂದು ರಸವತ್ತಾದ ಭಾಗವಾಗಿ ಕಂಡುಬಂದಿಲ್ಲ. ಅಂತೆಯೇ ಕನಕದಾಸರ ಕೀರ್ತನೆಗಳೂ ಬಹಳ ಉತ್ತಮ ವರ್ಗಕ್ಕೆ ಸೇರಿರುವುದಾಗಿದೆ. ಜ್ಞಾನದ ಮಹಿಮೆಯ ನಿರೂಪಣೆಯೂ ಹೆಚ್ಚಾಗಿ ಕಂಡುಬರುತ್ತದೆ. ವಿಶೇಷವಾಗಿ ಡಾಂಭಿಕ ವರ್ತನೆಯ ಖಂಡನೆ, ಸದ್ವರ್ತನೆಯ ಪ್ರಶಂಸೆ ಮತ್ತು ಭಕ್ತಿಮಾರ್ಗದ ಶ್ರೇಷ್ಠತೆ, ಮುಕ್ತಿ–ಮೋಕ್ಷಗಳ ಆಕಾಂಕ್ಷೆ– ಇತ್ಯಾದಿ ವಿಷಯಗಳನ್ನು ಸ್ವಾಭಾವಿಕ ರೀತಿಯಲ್ಲಿ ಹಾಡಲ್ಪಡಬಹುದಾಗಿದೆ.

"ಕೀರ್ತನೆಗಳು" ತಮ್ಮ ಸಾಮಾಜಿಕ ಅನುಭವ ಚಿಂತನೆಗಳನ್ನು ಎಷ್ಟೇ ಕಲಾತ್ಮಕವೆಂದರೂ ತಮ್ಮ ಅಭಿದಾ ವ್ಯಾಪಾರದ ಮೂಲಕವಾಗಿಯೇ.[೧೫]

ಕನಕದಾಸರಿಗೆ ಬದುಕಿನ ವಿಷಮತೆ ಜೀವನದ ಸ್ವರೂಪವನ್ನು ತೆರೆದು ತೋರಿಸಿತ್ತು; ಪಾಡನ್ನು ಹಾಡಾಗಿ ಪರಿವರ್ತಿಸುವ ಕಲೆ ಅವರಿಗೆ ಸಿದ್ಧಿಸಿತ್ತು. ಸ್ಥಾನ ಭ್ರಷ್ಟನೂ ಆಗಿದ್ದ ಈ ದಲಿತನಿಗೆ ಅತ್ತ ಆಡಳಿತ ವರ್ಗದಿಂದಲೂ, ಇತ್ತ ಸಂಪ್ರದಾಯ ಜಡ ಪಂಡಿತ ವರ್ಗದಿಂದಲೂ ಪುರಸ್ಕಾರ ದೊರೆಯಲಿಲ್ಲ. ಹೀಗಾಗಿ ಅವರ ಈ ಪರಿಸರದ ಕೀರ್ತನೆಗಳೆಂದರೆ ನೋವಿನ ನುಡಿಗಳು.[೧೬] ಇದನ್ನು ಅವರ ಹಲವಾರು ಕೀರ್ತನೆಗಳಲ್ಲಿ ಕಾಣಬಹುದು. ಅವರ ಬದುಕನ್ನು, ಅವರ ಸಮಕಾಲೀನ ಸಮಾಜದ ಮನೋಧರ್ಮವನ್ನು ಅರ್ಥ ಮಾಡಿಕೊಳ್ಳಲು ಈ ಕೀರ್ತನೆಗಳು ಸಹಕಾರಿಗಳಾಗಿವೆ.[೧೭] "ಹುಟ್ಟಿದಂದಿಂದಿಗೂ ಸುಖವ ನಾ ಕಾಣದೆಲೆ ಕಷ್ಟನಾದೆನು", "ಮುಟ್ಟಲಮ್ಮರು ಎನ್ನ ಸತಿ ಸುತರು ಬಾಂಧವರು ಅಟ್ಟಿ ಎಳೆಯುತ್ತಿಹರೊ", ಎಂದು ಹೇಳುವಂತಹ ನಾನಾ ಕೀರ್ತನೆಗಳಲ್ಲಿ ಸಂಪನ್ನಗೊಳಿಸಿದರು. ಅಷ್ಟೇ ಅಲ್ಲ; ಅವರ ಕೃತಿಗಳಲ್ಲಿ ಇಡೀ ಕನ್ನಡ ಕೀರ್ತನಕಾರರ ಸಮುದಾಯದಲ್ಲೇ ಕಾವ್ಯದ ಸತ್ವ ಹೆಚ್ಚಿನ ಪ್ರಮಾಣದಲ್ಲಿ ಪ್ರಕಟವಾಗಿರುವುದು ಕನಕದಾಸರಲ್ಲೇ.[೧೮] ಎನ್ನುವುದನ್ನು ಕಾಣುತ್ತೇವೆ. ಅವರ ಸಮಾಜಮುಖಿ ಕೀರ್ತನೆಗಳಲ್ಲಿ ಸಾಮಾಜಿಕ ಪ್ರಜ್ಞೆ ವಿಜೃಂಭಿಸಿರುವುದೂ ಒಂದು ವಿಶೇಷ. ಸಮಾಜದಲ್ಲಿ ಸಾಮರಸ್ಯವನ್ನುಂಟು ಮಾಡುವ ಭಕ್ತಿಪಂಥದ ಮುಂಚೂಣಿಯಲ್ಲಿ ನಿಂತು ಸಮಾಜದ ಕುಂದು ಕೊರತೆಗಳನ್ನೇ ತಮ್ಮ ಸಾಹಿತ್ಯದ ವಿಷಯವಳಗಿ ಆಯ್ಕೆ ಮಾಡಿ–ಕೊಂಡು ರಚಿಸಿದ ಕನಕದಾಸರು ತಮ್ಮ ಕೀರ್ತನೆಗಳಲ್ಲಿ ಇಪ್ಪತ್ತು–ಇಪ್ಪತ್ತೈದು ರಾಗಗಳನ್ನು ಬಳಸಿದ್ದಾರೆ. ಅವೆಲ್ಲಾ ಅಚ್ಚ ಕರ್ನಾಟಕ ಸಂಪ್ರದಾಯಕ್ಕೆ ಸೇರಿದಂತಹವು. ಅದರಲ್ಲಿ ಕೆಲವು ರಾಗಗಳು ಅಂದರೆ, ಕಾಂಭೋಜಿ, ಮುಖಾರಿ, ಮೋಹನ, ಶಂಕರಾಭರಣ, ನಾಟ, ಕಲ್ಯಾಣಿ ಮುಂತಾದವು ಅವರಿಗೆ ಬಹಳ ಪ್ರಿಯವೆನಿಸುತ್ತವೆ.[೧೯]

✳✳✳ ✳✳ ✳✳✳

## ✣ ✣ ✣ ಅಡಿಟಿಪ್ಪಣಿಗಳು ✣ ✣ ✣

೧) ಡಾ.ಎಸ್.ಎಸ್.ಕೋತಿನ "ಕಸಾದ" ಸಂ–೧, ಪು.೬೫

೨) ---ಅದೇ-----, ಪು.೬೪

೩) ---ಅದೇ----, ಪು.೬೫

೪) ಡಾ. ಎ. ಎಸ್. ವೇಣುಗೋಪಾಲ ರಾವ್ "ಕಸಾದ" ಸಂ–೧, ಪು.೨೫೩

೫) ಡಾ. ಎಸ್. ಎಸ್. ಕೋತಿನ "ಕಸಾದ" ಸಂ–೧, ಪು.೬೧

೬) ಪುಲುಮತಿ ಶ್ಯಾಮರಾವ್ "ವಿಜಯನಗರದ ಕಲೆ ಮತ್ತು ಸಾಹಿತ್ಯ", ಮೈಸೂರು ಸಂಸ್ಥಾನ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ ಪ್ರಕಟಣೆ–೧೯೫೬, ಪು. ೧೨೦

೭) -----ಅದೇ-----

೮) -----ಅದೇ-----, ಪು.೧೩೧

೯) ರಾಬರ್ಟ್ ಸ್ವೆಲ್ (ಅ) ಡಾ. ಸದಾನಂದ ಕನವಳ್ಳಿ "ಮರೆತುಹೋದ ಸಾಮ್ರಾಜ್ಯ", ಪು.೧೯೦

೧೦) ಪುಲುಮತಿ ಶ್ಯಾಮರಾವ್ "ವಿಜಯನಗರದ ಕಲೆ ಮತ್ತು ಸಾಹಿತ್ಯ", ಮೈಸೂರು ಸಂಸ್ಥಾನ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ ಪ್ರಕಟಣೆ–೧೯೫೬, ಪು. ೧೩೧

೧೧) ಪುಲುಮತಿ ಶ್ಯಾಮರಾವ್ "ವಿಜಯನಗರದ ಕಲೆ ಮತ್ತು ಸಾಹಿತ್ಯ", ಮೈಸೂರು ಸಂಸ್ಥಾನ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ ಪ್ರಕಟಣೆ–೧೯೫೬, ಪು. ೧೩೭

೧೨) ಡಾ. ಹಂಪನಾ. "ಕಸಾದ", ಸಂ–೧, ಪು.೨೬೯

೧೩) ಡಾ. ಎ.ವಿ. ನಾವಡ "ಕಸಾದ", ಸಂ–೧, ಪು.೩೪೭

೧೪) ----- ಅದೇ ------

೧೫) ಡಾ. ಎಸ್. ಎಸ್. ಕೋತಿನ "ಕಸಾದ" ಸಂ–೧, ಪು.೬೪

೧೬) ಡಾ. ಎ. ಎಸ್. ವೇಣುಗೋಪಾಲ ರಾವ್ "ಕಸಾದ" ಸಂ–೧, ಪು.೨೬೫

೧೭) ಟಿ. ಎನ್. ನಾಗರತ್ನ "ಕನಕದಾಸ", ಪು.೨೩

೧೮) ಡಾ. ಹಂಪನಾ "ಕಸಾದ", ಸಂ–೧, ಪು.೨೬೯

೧೯) ಬಿ.ವಿ.ಕೆ.ಶಾಸ್ತ್ರಿ "ಕಸಾದ", ಸಂ–೧, ಪು. ೬೦೪

✳✳✳ ✳✳ ✳✳✳

## ಆ) ಸಾಹಿತ್ಯಕ ಪರಿಚಯ

ಅಧ್ಯಯನದ ದೃಷ್ಟಿಯಿಂದಾಗಿ ಕನಕದಾಸರ ಸಾಹಿತ್ಯಕ ಕೃತಿಗಳನ್ನು ಒಟ್ಟಾರೆ, "ಕಾವ್ಯಗಳು" ಮತ್ತು "ಕೀರ್ತನೆಗಳು" ಎಂದು ಎರಡು ಭಾಗಗಳನ್ನಾಗಿ ವಿಂಗಡಿಸುವುದು ಬಹಳ ಮುಖ್ಯ. "ಕಾವ್ಯಗಳು" ವಸ್ತುನಿಷ್ಠವಾದವು ಮತ್ತು ಕೀರ್ತನೆಗಳು "ವ್ಯಕ್ತಿನಿಷ್ಠವಾದವುಗಳು.[೧].

ಪುರಂದರದಾಸರ ಕೀರ್ತನೆಗಳ ಸಂಖ್ಯೆಗೆ ಹೋಲಿಸಿದರೆ, ಕನಕದಾಸರ ಕೀರ್ತನೆಗಳು ಅತ್ಯಲ್ಪವಾಗಿ ಕಾಣುತ್ತೇವೆ; ಆದರೆ ಅವುಗಳ ಸತ್ವವನ್ನು ಗಮನಿಸಿದರೆ ಅವು ಪುರಂದರ ದಾಸರ ಕೀರ್ತನೆಗಳ ಸತ್ವದೊಂದಿಗೆ ಸಮಸ್ಪರ್ಧಿಯಾಗಬಲ್ಲವು. ಹಾಗೆ ನೋಡಿದರೆ, ಪುರಂದರದಾಸರ ಕೀರ್ತನೆಗಳಿಗಿಂತ ಕನಕದಾಸರ ಕೀರ್ತನೆಗಳಲ್ಲಿ ಕಾವ್ಯಗುಣ ಒಂದು ಕೈಮಿಗಿಲಾಗಿಯೇ ಇರುವಂತೆ ತೋರುತ್ತದೆ.[೨] ಕನಕದಾಸರ ಸಾಹಿತ್ಯಕ ಕೃತಿಗಳ ಬಗೆಗೆ ಮಾತನಾಡುವಾಗ ಅಥವಾ ಚಿಂತಿಸುವಾಗ ಸಾಮಾನ್ಯವಾಗಿ ಪುರಂದರಸಾಸರೊಂದಿಗೆ ಹೋಲಿಸಿ ನೋಡುವುದು ಬಹಳ ಹಿಂದಿನಿಂದಲೂ ರೂಢಿಗೆ ಬಂದ ಪದ್ಧತಿಯಾಗಿದೆ. "ಪುರಂದರದಾಸರಿಗೆ ಸಮತೂಕದವರೂ, ಸ್ವತಂತ್ರ ಕಾಂತಿಯುಳ್ಳವರೂ ಆಗಿ ಕನಕದಾಸರು ಅದೇ ಕಾಲದಲ್ಲಿ ಜೀವಿಸಿದ್ದರು."[೩]. "ಕನಕದಾಸರ ಕೀರ್ತನೆ, ಕಾವ್ಯ, ಮುಂಡಿಗೆಗಳಲ್ಲಿ ಸಹಜ ಸೊಮ್ಮು, ದೇಸೀಯ ಸವಿ ತಿರುಳು ಮೈಗೊಂಡಿವೆ. ಅವರು ಮಹಾಭಕ್ತನಾದಂತೆ ಮಹಾಕವಿಯ ಸತ್ವವುಳ್ಳವರು. ಆತನ ಜೀವನವೇ ಒಂದು ದೊಡ್ಡ ಕೃತಿಯಿದ್ದಂತೆ. ಅವರ ಕೃತಿಗಳಲ್ಲಿ ಮಹೋನ್ನತಿ ಬೆಳಗಿದೆ. ಪುರಂದರದಾಸರಂತೆ ಇವರೂ ಕೂಡಾ ಅವರಂತೆಯೇ ಕೆಲಮಟ್ಟಿಗೆ ಬೇರೆಯಾಗಿ, ತನ್ನ ಜೀವನ ಸಾಹಿತ್ಯಗಳ ಸಿದ್ಧಿಯಿಂದ ಕನ್ನಡಿಗರ ಚಿರಂತನವಾದ ಸಂಸ್ಕೃತಿ ದೀಪಗಳಲ್ಲಿ ಒಂದಾಗಿದ್ದಾರೆ."[೪]

–ಇಂತಹ ಮೇಲಿನ ವಿದ್ವಾಂಸರ ಹೇಳಿಕೆ, ಅಭಿಪ್ರಾಯಗಳನ್ನು ಕಂಡಾಗ; ಕನಕದಾಸರ ವ್ಯಕ್ತಿತ್ವ, ಜೀವನಶೈಲಿ, ಮನೋಭಾವನೆ ಇತ್ಯಾದಿ ಗುಣಗಳು ನಮಗೆ ಕೂಲಂಕುಷವಾಗಿ ಅರ್ಥವಾಗುತ್ತದೆ. ಮತ್ತು ಅವರ ಸಾಹಿತ್ಯಕ ಕೃತಿಗಳ ಪರಿಚಯದಿಂದ ನಮಗೆ ಸಂಪೂರ್ಣವಾಗಿ ಅವರ ಸಮಕಾಲೀನ ಜನಜೀವನ ಪದ್ಧತಿ ಮತ್ತು ಆ ಪರಿಸರದ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ, ಆರ್ಥಿಕ ಸ್ಥಿತಿ–ಗತಿಗಳ ಬಗೆಗೆ ಸಂಪೂರ್ಣ ಮಾಹಿತಿಗಳೂ ಸಿಗುತ್ತವೆ ಹಾಗೂ ಅಂದಿನ ಕಾಲದ ಒಟ್ಟಾರೆ ವಾತಾವರಣ ಮನದಟ್ಟಾಗುತ್ತದೆ. ಅಷ್ಟೇಅಲ್ಲ; ಸ್ವತಃ ಕವಿಗಳೂ, ದಾಸರಾದ ಕನಕದಾಸರ ಸ್ವಂತ ವ್ಯಕ್ತಿತ್ವದ ಪರಿಚಯವಾಗುತ್ತದೆ. "ಇವರ ವ್ಯಕ್ತಿತ್ವ ಪುರಂದರದಾಸರ ವ್ಯಕ್ತಿತ್ವಕ್ಕಿಂತಲೂ ಮಹೋನ್ನತಿಯಲ್ಲಾಗಲೀ, ತೂಕದಲ್ಲಾಗಲೀ ಕಿಂಚಿತ್ತೂ ಕಡಿಮೆಯಿಲ್ಲ ಎನ್ನುವಲ್ಲಿ ಅನುಮಾನವೇ ಇಲ್ಲ. ಕನಕದಾಸರು ಬಂದ ವರ್ಗದ ದೃಷ್ಟಿಯಿಂದ ಅವರ ಸಾಧನೆ ಮತ್ತಷ್ಟು ಮಹತ್ವ ಎನಿಸುತ್ತದೆ. ಈ ಕಾರಣಕ್ಕಾಗಿಯೇ ಅವರ "ಸಮಾಜ ವಿಡಂಬನೆ" ಕೃತಿಗಳಲ್ಲಿ ಹೆಚ್ಚಿನ ನೋವು, ಖಾರ, ಜೀವಂತ ಶಕ್ತಿ ಕಂಡುಬರುವುದು."[೫]

ಕನಕದಾಸರು ಕೇವಲ ಒಬ್ಬರು ದಾಸರಲ್ಲ. "ದಾಸರಲ್ಲಿ ಕವಿ– ಕವಿಯಲ್ಲಿ ಕಲಿ" ಎಂಬುದೇ ವಿಶೇಷ ಅಂಶ. ಕನ್ನಡ ಸಾಹಿತ್ಯದ ದೃಷ್ಟಿಯಿಂದ ನಾವು ಗಮನಿಸುವಾಗ ಅವರೊಬ್ಬರು "ಕವಿ" ಎನ್ನುವ ವಿಷಯವೇ ವಿಶೇಷ. ಅದೇ ಆಧ್ಯಾತ್ಮಿಕ ಕ್ಷೇತ್ರದ ದೃಷ್ಟಿಯಿಂದ ನೋಡುವವರಿಗೆ ಅವರೊಬ್ಬರು; "ದಾಸರು, ಸಂತರು, ಅಪರೋಕ್ಷ ಜ್ಞಾನಿಗಳು" ಎನ್ನುವ ಅಂಶವೇ ತೀವ್ರ ವಿಧವಾದ ಸಂತೋಷವನ್ನುಂಟುಮಾಡುತ್ತದೆ. ಒಟ್ಟಾರೆ, ಕನಕದಾಸರು ಸಾಹಿತ್ಯಕ, ಆಧ್ಯಾತ್ಮಿಕ – ಈ ಎರಡು ದೃಷ್ಟಿಗಳಿಂದ ಮಾತ್ರವಲ್ಲ; ಅದಕ್ಕಿಂತಲೂ ಮಿಗಿಲಾಗಿ ಆರೋಗ್ಯಕರ ರೀತಿಯಲ್ಲಿ ಅವರು ತಮ್ಮ ಸಮಕಾಲೀನ ಸಮಾಜವನ್ನು ತಿದ್ದಲು, ಸುಧಾರಣೆಗೊಳಿಸಲು ಅಪಾರವಾಗಿ ಶ್ರಮಿಸಿದ್ದಾರೆ. ಸಮಾಜದಲ್ಲಿದ್ದ "ಮೇಲು–ಕೀಳು"ಗಳೆಂಬ ಭೀಕರ ಖಾಯಿಲೆಯನ್ನು ಹೋಗಲಾಡಿಸಲು ದುಡಿದ ಮಹಾನ್ ವೈದ್ಯರು. ಹಿಂದೆ ವಿಜಯನಗರ ಸಾಮ್ರಾಜ್ಯ ಅರಸರ ದಂಡನಾಯಕನಾಗಿ ಶತ್ರುಗಳನ್ನು ಎದುರಿಸಲು ಹೋರಾಡಿದ ಮಹಾನ್ ಶೌರ್ಯವಂತನು ಈಗ ಸಮಾಜಲ್ಲಿ ಶತ್ರುವಿನ ಹಾಗೆ ಸೃಷ್ಟಿಯಾಗಿದ್ದ "ಸಮಾಜ ಘಾತುಕ" ಅಂಶಗಳ ವಿರುದ್ಧ ಸಾಹಸದಿಂದ ಹೋರಾಡಿದ್ದಾರೆ.

ಕನ್ನಡ ಸಾಹಿತ್ಯದ ಆರಂಭದ ಕವಿಗಳಂತೆ ಕನಕದಾಸರು ಚಂಪೂ ಕಾವ್ಯಗಳನ್ನು ರಚಿಸಿಲ್ಲದಿರಬಹುದು. ಆದರೆ ಕನ್ನಡದ ಆದಿಕವಿ "ಕವಿತಾ ಗುಣಾರ್ಣವ"ನಾದ ಪಂಪನಂತೆಯೇ ಕಲಿಯಾಗಿದ್ದವರು; ಕವಿಯಾಗಿ ಕೀರ್ತಿ ಪಡೆದಂತಹವರೇ ಆಗಿದ್ದಾರೆ. ಪಂಪನು ನುಡಿದಂತೆಯೇ; "ಬೆಳಗುವೆನಿಲ್ಲಿ ಲೌಕಿಕಮಮಲ್ಲಿ ಜಿನಾಗಮಮಂ" ಎಂಬಂತೆ; "ಧಾರ್ಮಿಕ ಕೃತಿ"ಯಾಗಿ "ಆದಿಪುರಾಣ"ವನ್ನೂ; ಮತ್ತು ಲೌಕಿಕ ಕೃತಿಯಾಗಿ "ವಿಕ್ರಮಾರ್ಜುನವಿಜಯ" ಕೃತಿಯನ್ನು ರಚಿಸಿರುವುದು ಎಲ್ಲರಿಗೂ ತಿಳಿದ ವಿಚಾರವೇ. ಅಂತೆಯೇ, ಪಂಪನು ಧಾರ್ಮಿಕ ಕಾವ್ಯವಾದ "ಆದಿಪುರಾಣ"ದಲ್ಲಿ "ನೀಲಾಂಜನೆಯ ನೃತ್ಯ ಪ್ರಸಂಗ", "ಶ್ರೀಮತಿ–ವಜ್ರಜಂಘ"ರ ಪ್ರಸಂಗ ಮತ್ತು ಇತರ ಸಂದರ್ಭಗಳಲ್ಲಿ ಧರ್ಮಶ್ರದ್ಧೆ, ರಸಿಕತೆ–ಶೃಂಗಾರ ಭಾವಗಳನ್ನು ಉತ್ತುಂಗಶಿಖರಕ್ಕೇರಿಸಿರುವಂತೆ ಕನಕದಾಸರು ತಮ್ಮ "ಮೋಹನ ತರಂಗಿಣಿ" ಕಾವ್ಯ ರಚಿಸಿದ್ದಾರೆ. ಇಲ್ಲಿ ಅವರು ತೋರಿರುವ ಸನ್ನಿವೇಶ ನಿರ್ಮಾಣ, ಔಚಿತ್ಯಪ್ರಜ್ಞೆ ಪಂಪನಿಗೆ ಸರಿಸಾಟಿಯಾಗಿ ನಿಲ್ಲದಿದ್ದರೂ ಓದುಗರಲ್ಲಿ ನಿರಾಶೆಯನ್ನಂತೂ ಉಂಟುಮಾಡುವುದಿಲ್ಲ. ಪಂಪನ "ಆದಿಪುರಾಣ"ವು ಧಾರ್ಮಿಕ, ಶೃಂಗಾರ ಕಾವ್ಯವಾದರೆ; ಕನಕದಾಸರ "ಮೋಹನ ತರಂಗಿಣಿ"ಯೂ ಕೂಡಾ ಅಷ್ಟೇ ! ಈ ಎರಡರಲ್ಲೂ ಪ್ರಮುಖವಾಗಿ ನಾವು ಪುರಾಣವನ್ನಾಧರಿಸಿದ ವಸ್ತುವನ್ನೇ ಕಾಣುತ್ತೇವೆ. ಆದರೆ ಪಂಪನದು "ಚಂಪೂ ಶೈಲಿ"ಯಾದರೆ; ಕನಕದಾಸರದು "ಸಾಂಗತ್ಯ ಶೈಲಿ"ಯ ಕೃತಿ. ಚಂಪೂನಲ್ಲಿ ಬರುವ ಬಂಧ, ಸಾಂಗತ್ಯದಲ್ಲಿ ತರಲು ಅಸಾಧ್ಯ. ಆದರೂ "ಸತ್ಕಾವ್ಯ"ದ ಸಾಲಿನಲ್ಲಿ ನಿಲ್ಲಬಲ್ಲ ಈ ಕೃತಿ ಕಾವ್ಯಗುಣವನ್ನು ಧಾರಾಳವಾಗಿಯೇ ಪ್ರಕಟಿಸುತ್ತದೆ.[೬] ಹಾಗೆಯೇ, ಪಂಪನು ತನ್ನ ಲೌಕಿಕ ಕೃತಿಯಾದಂತಹ "ವಿಕ್ರಮಾರ್ಜುನ ವಿಜಯ"ವನ್ನು ತನ್ನ ಆಶ್ರಯದಾತನಾದ ರಾಷ್ಟ್ರಕೂಟರ ಸಾಮಂತನಾದ ಚಾಳುಕ್ಯ ರಾಜ ಎರಡನೇ ಅರಕೇಸರಿಗೆ ಮಹಾಭಾರತದ ಅರ್ಜುನ ಪಾತ್ರಕ್ಕೆ ಸಮೀಕರಿಸಿದಂತೆಯೇ; ದಾಸರು ಇಲ್ಲಿ ತನ್ನ ಆಶ್ರಯದಾತನಾದ ವಿಜಯನಗರ ಸಾಮ್ರಾಜ್ಯ "ಸುವರ್ಣಯುಗ"ಕ್ಕೆ ಕಾರಣನಾದ ಶ್ರೀಕೃಷ್ಣದೇವರಾಯನನ್ನು ಜಗದೊಡೆಯ ದ್ವಾರಕೆಯ ಶ್ರೀಕೃಷ್ಣನಿಗೆ ಹೋಲಿಸಿದ್ದಾರೆ. ಇಲ್ಲಿ ಅವರು ಒಬ್ಬ ಸಂತನಾಗಿಯೂ, ಧರ್ಮಶ್ರದ್ಧೆಯುಳ್ಳ ರಸಿಕ ಹಾಗೂ ಶೃಂಗಾರಪ್ರಿಯ ಕವಿಯಾಗಿಯೂ ತಮ್ಮ ಸಾಹಿತ್ಯಕ ಪ್ರತಿಭೆಯನ್ನು ಮೆರೆದಿದ್ದಾರೆ. ಇಷ್ಟೊಂದು ಮನೋಜ್ಞವಾಗಿ ಇಂತಹ ಮಹಾನ್ ಶೃಂಗಾರಕಾವ್ಯ ರಚಿಸಲು ಒಬ್ಬ ಸಂತರಿಂದ ಸಾಧ್ಯವೇ ? ಎಂಬ ಸಂಶಯ ಕಾಡುವುದಂತೂ ನಿಜ. ಆದ್ದರಿಂದಲೇ ಇವರನ್ನು "ದಾಸರಲ್ಲಿ ಕವಿ" ಎಂಬ ವಿಶೇಷ ಗುಣದಿಂದ ಗುರ್ತಿಸುವುದು.

ಈ ಕೃತಿಯ "ಉಷಾ-ಅನಿರುದ್ಧ"ರ ಸಮಾಗಮ ಸಂದರ್ಭದಲ್ಲಿ ಬರುವ ಕನಸಿನ ಪ್ರಣಯ ಬೇಟೆಯೇ ಮೊದಲಾದ ಸನ್ನಿವೇಶಗಳಲ್ಲಿ ಕವಿ ಕನಕದಾಸರು ತಾವೊಬ್ಬ "ಸಂತರು" ಎನ್ನುವುದನ್ನೇ ಸಂಪೂರ್ಣ ಮರೆತು ಕಾವ್ಯ ರಚಿಸಿರುವುದಾಗಿ ಕಾಣಿಸುತ್ತದೆ. ಶೃಂಗಾರ ಕವಿಯಾಗಿ ಮೆರೆದಿರುವುದು ಕಂಡುಬರುತ್ತದೆ. ಪ್ರಧಾನವಾಗಿ ಶೃಂಗಾರ ಕಾವ್ಯವೆನಿಸಿದ ಈ ಕೃತಿಯಲ್ಲಿ ಕವಿ ಹೇಳಬೇಕಾದ್ದನ್ನು ಔಚಿತ್ಯವರಿತು, ಸಂಕೋಚವಿಲ್ಲದೆ ನೇರವಾಗಿ ಹೇಳುವುದರ ಮುಖಾಂತರ ಇದನ್ನು ಒಂದು ನಿಜವಾದ ಕಾವ್ಯವಾಗಿಸಿದ್ದಾರೆ.[5]

ಪ್ರಾಚೀನ ಕಾಲದ ಕನ್ನಡ ಸಾಹಿತ್ಯ ಕವಿಗಳು ಅಂದಿನ ಕಾಲದಲ್ಲಿ ತಮ್ಮ ಸಾಹಿತ್ಯಕ ಸಂದರ್ಭದಲ್ಲಿ ಸಂಪೂರ್ಣ ಸ್ವಾತಂತ್ರ್ಯವಹಿಸಲು ಸಾಧ್ಯವೇ ಇರಲಿಲ್ಲ. ಕಾರಣ, ಆಶ್ರಯದಾತ ಅರಸರುಗಳಿಗೆ ಕೃತಜ್ಞತಾಪೂರ್ವಕರಾಗಿ ಇರಬೇಕಾದಾಗ ಅವರ ಮನಃಸಂತೋಷಪಡಿಸುವುದಕ್ಕೆ ತಕ್ಕಂತಹ ಸಾಹಿತ್ಯ ಸೃಷ್ಟಿಯನ್ನೇ ಮಾಡಬೇಕಾಗಿತ್ತು. ಜೊತೆಗೆ ಸಂಸ್ಕೃತಭೂಯಿಷ್ಠ ಕನ್ನಡ ಭಾಷೆಯೊಂದಿಗೆ, ಸಂಸ್ಕೃತ ವೃತ್ತಗಳು ಮತ್ತು ಅಷ್ಟಾದಶ ವರ್ಣನೆಗಳಿಂದ ಬಂಧಿಸಲ್ಪಟ್ಟಿದ್ದರು. ಇದಕ್ಕೆ ಪಂಪ, ಪೊನ್ನ, ರನ್ನರಂತಹ ಕವಿಗಳೂ ಹೊರತಾಗಿಲ್ಲ. ಏಕೆಂದರೆ ಅಂದಿನ ಕಾಲದಲ್ಲಿ ಕವಿಗಳು ರಚಿಸುತ್ತಿದ್ದಂತಹ "ವಸ್ತುನಿಷ್ಠ ಕಾವ್ಯ"ವೇ ಅವರಿಗೆ ದೊಡ್ಡ ಕಡಿವಾಣವಾದಂತಾಗಿತ್ತು ! ಅಂತಹ ಕಾವ್ಯಗಳು ಪಂಡಿತವರ್ಗಕ್ಕೆ ಮೆಚ್ಚುಗೆಯಾಗುತ್ತಿತ್ತೆಂಬುದು ಸತ್ಯದ ಸಂಗತಿಯಾದರೂ; ಸಾಹಿತ್ಯ ಅಭಿವ್ಯಕ್ತಿಯಲ್ಲಿ ಕಾವ್ಯ ರಚಿಸುವ ಕವಿಗಳಿಗೇ ವೈಯಕ್ತಿಕವಾಗಿ ಹೆಚ್ಚಿನ ಸ್ವಾತಂತ್ರ್ಯವಿರಲಿಲ್ಲ ಎನ್ನುವುದೇ ವಿಷಾದಕರ ಸಂಗತಿಯಾಗಿದೆ. ಆದರೆ, ಈ ವಿಷಯದಲ್ಲಿ ಬಹಳ ಮುಖ್ಯವಾಗಿ ಕನಕದಾಸರು ತಮ್ಮೆಲ್ಲಾ ಪೂರ್ವದ ಹಿರಿಯ ಕವಿಗಳನ್ನು ಮೀರಿಸಿ ನಿಂತಿದ್ದಾರೆ. ಈ ವಿಷಯದಲ್ಲಿ ಯಾವ ಸಂಶಯವೂ ಇಲ್ಲ. ಮಾನವ ಸಂಬಂಧವಾದ ಯಾವುದೇ ವಿಷಯ ಅವರ ಕೃತಿಗೆ ವಸ್ತುವಾಗಬಲ್ಲದು. ಮತ್ತು ಮಾನವನ ವೈಚಾರಿಕತೆಯ ಜಗತ್ತಿನೊಳಗಿದ್ದುಕೊಂಡೇ ಅವರು ತಮ್ಮ ಸಾಹಿತ್ಯ ಪ್ರಪಂಚದಲ್ಲಿ ಧಾರ್ಮಿಕ ಚಿಂತನೆಯ ಜೊತೆಜೊತೆಗೇ ವ್ಯಕ್ತಿ ಸ್ವಾತಂತ್ರ್ಯದ ಕಡೆಗೂ ಗಮನಹರಿಸಿದ್ದಾರೆ.

ಇದಿಷ್ಟೂ ಅಂಶಗಳು, ಕನಕದಾಸರ ಸಾಹಿತ್ಯಕ ಶಕ್ತಿ, ಪ್ರೇರಣೆಗಳ ಬಗೆಗೆ ಕುರಿತು ಚಿಂತಿಸಿದ್ದಾಯಿತು. ಇನ್ನು ಅವರ "ಸಮಕಾಲೀನ ಪ್ರಜ್ಞೆ" ಮತ್ತು "ಸಾಮಾಜಿಕ ಪ್ರಜ್ಞೆ" ಕುರಿತು ವಿಷಯಗಳು ಅವರ "ಕೀರ್ತನ ಸಾಹಿತ್ಯ"ದಲ್ಲಿ ಧಾರಾಳವಾಗಿ ಪ್ರಕಟಗೊಂಡಿರುವುದನ್ನು ನಾವು ಕಾಣುತ್ತೇವೆ. ಪ್ರಾಚೀನ ಕಾಲದ ಯಾವ ಕವಿಗಳ ಸಾಹಿತ್ಯ ಕೃತಿಗಳಲ್ಲೂ ಕಾಣಿಸಿಕೊಳ್ಳದ ಅಥವಾ ಅತ್ಯಂತ ವಿರಳ ಎನ್ನಬಹುದಾದ ಸಮಕಾಲೀನ ಜನಜೀವನದ ಯಥಾವತ್ತಾದ ಚಿತ್ರಣ ಕನಕದಾಸರ ಕೀರ್ತನೆಗಳಲ್ಲಿ ಅತ್ಯಂತ ಧಾರಾಳವಾಗಿ ಮತ್ತು ಸಹವಾಗಿಯೂ ಕಂಡುಬರುತ್ತದೆ. ಸಮಾಜದಲ್ಲಿ ಆಳವಾಗಿ ಬೇರೂರಿದ್ದ ಕಂದಾಚಾರ, ಅಸಮತೆ, ಮೂಢನಂಬಿಕೆ, ಜಾತೀಯತೆಯನ್ನು ಕಿತ್ತೊಗೆಯಲು ಇವರು ಧಾರ್ಮಿಕ ಮುಖಂಡರಂತೆ ನಿಂತು ಹೋರಾಟ ನಡೆಸಿರುವುದನ್ನು ನಾವು ಕಾಣುತ್ತೇವೆ. ಕನಕದಾಸರ ಸಾಹಿತ್ಯದ ಕೊಡುಗೆಯಲ್ಲಿ ಕಂಡುಬರುವ ವೈಶಿಷ್ಟ್ಯಕ್ಕೆ ಇದೂ ಒಂದು ಪ್ರಮುಖ ಕಾರಣವಾಗಿದೆ.

"ಸಾಹಿತ್ಯ ರತ್ನತ್ರಯ"ರೆಂದೇ ಖ್ಯಾತರಾದ ಪಂಪ, ಪೊನ್ನ, ರನ್ನ ಹಾಗೂ ಉಳಿದ ಕವಿಗಳ ನಂತರ ಬಂದಂತಹ ಕುಮಾರವ್ಯಾಸ, ಕುಮಾರ ವಾಲ್ಮೀಕಿ, ರುದ್ರಭಟ್ಟ, ರತ್ನಾಕರವರ್ಣಿ, ನಂಜುಂಡ ಕವಿ, ವಚನಕಾರರು- ಮೊದಲಾದ ಅನೇಕ ಕವಿಗಳ ಜೊತೆಗೆ ಕನಕದಾಸರನ್ನು ಹೊಂದಿಸಿ ನೋಡುವ ಪ್ರಯತ್ನಗಳನ್ನು ಅನೇಕ ವಿದ್ವಾಂಸರು

ಮೊದಲಿನಿಂದಲೂ ಮಾಡಿಕೊಂಡು ಬಂದಿದ್ದಾರೆ. ಕುಮಾರವ್ಯಾಸನಂತಹ "ಶ್ರೀಕೃಷ್ಣ ಭಕ್ತಿ"ಯನ್ನು, ವಚನಕಾರರಂತೆ "ಸಾಮಾಜಿಕ ಪ್ರಜ್ಞೆ"ಯನ್ನೂ, ಸೊಗಸಾದ ವಚನಗಳಂತೆಯೇ; ಬೆಡಗಿನ "ಮುಂಡಿಗೆ"ಗಳನ್ನು ಮತ್ತು "ರಾಮಧಾನ್ಯ ಚರಿತ್ರೆ"ಯಂತಹ ವಿಶಿಷ್ಟ ಕಾವ್ಯವಸ್ತುವಿನಿಂದ ಮೆರೆದಿರುವದುದನ್ನೇ ಕಾಣುತ್ತೇವೆ.

ಕನಕದಾಸರ "ಹರಿಭಕ್ತಿಸಾರ" ೧೧೦ ಷಟ್ಪದಿಗಳ ಕಿರುಕೃತಿ. ಕೃಷ್ಣ ಮಹಿಮೆ, ಕೃಷ್ಣ ಭಕ್ತಿಯು ಕಾವ್ಯದುದ್ದಕ್ಕೂ ಹರಡಿದೆ. ಇಲ್ಲಿ ಸಂತರಾದ ಇವರ ಉದ್ದೇಶ ನೇರವಾಗಿ ಮತ್ತು ಸ್ಪಷ್ಟವಾಗಿದೆ. ಭಟ್ಟಿ ಇಳಿಸಿದಂತೆ ಇವರ ಭಾವನೆಗಳು ಮಡುಗಟ್ಟಿ ವ್ಯಕ್ತಗೊಂಡಿದೆ. ದಾಸರ ಕಾವ್ಯಪ್ರತಿಭೆ ಉಕ್ಕಿ ಹರಿದಿರುವುದನ್ನು ಕಾಣುತ್ತೇವೆ.[೮] ಇಲ್ಲಿ ಪ್ರತಿ ಪದ್ಯವೂ "ರಕ್ಷಿಸು ನಮ್ಮನನವರತ" ಎಂಬ ಅಂಕಿತದೊಂದಿಗೆ ಅಂತ್ಯಗೊಳಿಸಿರುವುದೊಂದು ವಿಶೇಷ ಶೈಲಿಯಾಗಿ ಕಂಡುಬಂದಿದೆ. ಮತ್ತು ಇದೇ ಆ ಕಾವ್ಯದ ವೈಶಿಷ್ಟ್ಯವೂ ಆಗಿದೆ.

ಕನಕದಾಸರು ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ಕುಮಾರವ್ಯಾಸನ ಪ್ರಭಾವಕ್ಕೆ ಒಳಗಾಗಿದ್ದರೂ, "ನಳಚರಿತ್ರೆ"ಯಲ್ಲಿಯೂ ತನ್ನ ಅಪಾರ ಸ್ವಂತಿಕೆಯನ್ನು ಮೆರೆದಿದ್ದಾರೆ. ಪಂಪ, ಕುಮಾರವ್ಯಾಸರಂತಹ ಕವಿಗಳನ್ನು ಅನುಕರಿಸುವುದು ಅತೀ ಸುಲಭವೂ ಅಲ್ಲ. ತಪ್ಪೂ ಅಲ್ಲ. ಆದರೆ ಹಾಗೆ ಅನುಕರಿಸುವಾಗ ತನ್ನ ಸ್ವಂತಿಕೆಯನ್ನು ಕಾಯ್ದಿರಿಸಿಕೊಳ್ಳುವುದೇ ದೊಡ್ಡ ವಿಷಯ.[೯] ಇದು ಅತ್ಯಂತ ಜನಪ್ರಿಯತೆಗಳಿಸಿದ ಕಥೆ. ಮತ್ತು ಇದು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿದ್ದು ಬಹು ಮೆಚ್ಚುಗೆಗಳಿಸಿದ ಕೃತಿಯಾಗಿದೆ. "ಮಹಾಭಾರತ"ದ "ವನಪರ್ವ"ದಲ್ಲಿ ಬರುವ "ನಳೋಪಾಖ್ಯಾನ"ವೇ ಈ ಕೃತಿಗೆ ಆಕರ. ಔಚಿತ್ಯಪೂರ್ಣ ವರ್ಣನೆಗಳು, ಪಾತ್ರಚಿತ್ರಣ, ಕಥಾ ನಿರೂಪಣೆ, ಸರಳವಾದ ಶೈಲಿ, ಭಾಷೆಗಳಿಂದಾಗಿ ದಾಸರ ವಿಶಿಷ್ಟ ಕಾವ್ಯ ಪ್ರತಿಭೆ ತಿಳಿಯುತ್ತದೆ.

ಇನ್ನು ದಾಸರು ಸೃಷ್ಟಿಸಿದ "ರಾಮಧಾನ್ಯಚರಿತೆ" ಷಟ್ಪದಿಯಲ್ಲಿದೆ. ವಿನೂತನ ಶೈಲಿಯ ಕಾವ್ಯವಸ್ತು ಇದರದ್ದು. ಇಲ್ಲಂತೂ ದಾಸರು ತಮ್ಮ ವೈಶಿಷ್ಟ್ಯತೆಯನ್ನು ಅಪಾರವಾಗಿ ಕಾಯ್ದಿರಿಸಿದ್ದಾರೆ. ವಸ್ತು ಸಾಮಾನ್ಯದ್ದೇ ಆದರೂ ವಸ್ತುನಿಷ್ಠವಾದುದು ಮತ್ತು ಬಹಳ ಗಾಂಭೀರ್ಯತೆಯಿಂದ ಕೂಡಿದ ಪೌರಾಣಿಕ ಪಾತ್ರಗಳನ್ನು ಬಳಸಿಕೊಂಡು ಸಾಮಾಜಿಕ ಪ್ರಜ್ಞೆಯನ್ನು ಮೆರೆದಿದ್ದಾರೆ. ಅವರ ಕಲ್ಪನೆಯ ಒಂದು "ಬೃಹತ್ ಸೃಷ್ಟಿ" ಈ ಕೃತಿಯಾಗಿದೆ.

ಇದಿಷ್ಟೂ ಕನಕದಾಸರ ಕಾವ್ಯದ ಬಗೆಗಿನ ಮಾತುಗಳಾದರೆ; ಇನ್ನು ಅವರ ಕೀರ್ತನೆಗಳು ಹೆಚ್ಚಿನ ಸಂಖ್ಯೆಯಲ್ಲಿಲ್ಲದಿದ್ದರೂ, ಮೌಲ್ಯದ ದೃಷ್ಟಿಯಿಂದ ಅವು ಬಹಳ ಪ್ರಮುಖವಾದವುಗಳಾಗಿದೆ. ತಮ್ಮ ಮನೋಧರ್ಮವನ್ನು ಇಲ್ಲಿ ಬಹಳ ಉಚಿತವಾಗಿ, ಸಫಲವಾಗಿ ಪ್ರಕಟಿಸಿದ್ದಾರೆ. "ಇರುವುದನ್ನು ಇದ್ದಂತೆಯೇ ಹೇಳುವುದು"– ಅವರ ಸಾಹಿತ್ಯದಲ್ಲಿ ಕಂಡು ಬರುವ ಅವರದ್ದೊಂದು ವಿಶಿಷ್ಟ ಗುಣ. ಅದು ಅವರ ಕೀರ್ತನ ಸಾಹಿತ್ಯದಲ್ಲಿ ಅದರಲ್ಲಿ ಸಮಾಜಮುಖಿ ಕೃತಿಗಳಲ್ಲಿ ಕೊಂಚ ಮೊನಚಾಗಿಯೇ ಕಾಣಿಸುತ್ತದೆ. ಇಂತಹ ಬಿಚ್ಚುನುಡಿಯೇ ಇತರ ಕವಿಗಳು, ಕೀರ್ತನಕಾರರಲ್ಲಿ ಬಹಳ ಅಪರೂಪ. "ಧರ್ಮವಿಲ್ಲದ ಅರಸು ಮುರಿದ ಕಾಲಿನ ಗೊರಸು", "ಕರುಣ ಬಂದರೆ ಕಾಯೋ ಮರಣ ಬಂದರೆ ಒಯ್ಯೋ", "ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ"– ಇತ್ಯಾದಿ ಕೀರ್ತನೆಗಳಲ್ಲಿ ದಾಸರ ದೃಷ್ಟಿ ಅತ್ಯಂತ ದಿಟ್ಟವಾಗಿಯೂ, ಗಟ್ಟಿಯಾಗಿಯೂ ಕಾಣಿಸುತ್ತದೆ.

ಸಮಾಜದ ಕೆಳವರ್ಗದಿಂದ ಬಂದ ಈ ಕವಿಗೆ ಎಲ್ಲಾ ದೇವರೂ ಒಂದೇ.

'ಒಕ್ಕೊಳ್ಳೆ ಪದಗಳ ಹನುಮಪ್ಪ ಹಾಡ್ಯಾನ
ಚೆಲುವ ಕನಕಪ್ಪ ಕುಣಿದ್ಯಾನ'

ಅಷ್ಟೇಅಲ್ಲ; ಅವರು ಬಂದ ನೆಲೆ-ಸೆಲೆಗಳು ಸಾಹಿತ್ಯದ ಸೊಗಸು, ಸೊಬಗಿಗೇ ವೈಶಿಷ್ಟ್ಯಪೂರ್ಣತೆಯನ್ನು ತಂದುಕೊಟ್ಟಿವೆ.

'ನಾವು ಕುರುಬರು ನಮ್ಮ ದ್ಯಾವರು ಬೀರಪ್ಪ
ಕಾವ ನಮ್ಮಜ್ಜ ನರಕುರಿಗಳ ಹಿಂಡು
ಅಷ್ಟಮದ ಮತ್ಸರಗಳೆಂಬ ಟಗರುಗಳ
ದೃಷ್ಟಿ ಜೀವಾತ್ಮನೆಂಬೋ ಆಡು'

-ಹೀಗೆ ಕನಕದಾಸರು ತಮ್ಮ ಜೀವನದಲ್ಲಿ "ಕ್ರಿಯಾಶೀಲ ತಪಸ್ಸಿನ ಫಲವೆಲ್ಲ ಕೀರ್ತನೆಗಳಾಗಿ ಲೋಕದ ನಾಡಿಯನ್ನೇ ಮಿಡಿಸಿವೆ" ಎನ್ನುವುದನ್ನು ಒತ್ತಿ ಹೇಳಲೇಬೇಕು.[೧೦]

ಈ ಕೀರ್ತನೆಗಳನ್ನು ಸ್ಥಲವಾಗಿ "ಆತ್ಮಪರಿಶೋಧನೆ", "ಆತ್ಮನಿವೇದನೆ" ಮತ್ತು "ಸಮಾಜದ ಕಲ್ಪನೆ" ಎಂದು ಮೂರು ಭಾಗಗಳಾಗಿ ವಿಂಗಡಿಸಬಹುದು.

"ದಾಸಸಾಹಿತ್ಯ"ದಲ್ಲಿ ಇಂತಹ ಸಂತರು, ಕವಿಗಳಾದ ಕನಕದಾಸರನ್ನು ಬಿಟ್ಟರೆ; ಇನ್ನು "ವಚನಸಾಹಿತ್ಯ"ದಲ್ಲಿ ಹಲವಾರು ವಚನಕಾರರು ಮಾತ್ರ ಬದುಕಿನ ಬಗೆಗಿನ, ವ್ಯವಸ್ಥೆಯ ಬಗೆಗಿನ ವಿರುದ್ಧ ಹೋರಾಟ ನಡೆಸಿ, ತಮ್ಮ ಅಸ್ತಿತ್ವಕ್ಕಾಗಿ ಧ್ವನಿ ಎತ್ತಿದವರಾಗಿದ್ದಾರೆ. ಜೊತೆಗೆ "ಭಕ್ತಿಮಾರ್ಗ"ದ ಸರಳ ದಾರಿ ತೋರಿಸಿದವರಾಗಿದ್ದಾರೆ. ಅಂತೆಯೇ, ಇಂತಹ ವಚನಕಾರರಲ್ಲಿ ಕನಕದಾಸರ ನಂತರ ಸಾಹಿತ್ಯಕ ವೈಶಿಷ್ಟ್ಯತೆಯನ್ನು ಕಾಣುತ್ತೇವೆ.

ಒಟ್ಟಾರೆ, ದಾಸರಾಗಲಿ, ವಚನಕಾರರೇ ಆಗಲಿ, "ಒಣ ವೇದಾಂತ"ವನ್ನು, "ಒಣ ತತ್ತ್ವ"ವನ್ನು ಬೋಧಿಸದೆ; ಅದನ್ನು ವಿರೋಧಿಸಿದವರಾಗಿದ್ದಾರೆ ಮತ್ತು "ಮುಕ್ತಿ ಸಾಧ್ಯವಿಲ್ಲ" ಎಂದು ಜಗತ್ತಿಗೆ ತಿಳಿಸಿ ಹೇಳಿರುವುದೇ ಮಹತ್ವಪೂರ್ಣ ಅಂಶ.

ಇನ್ನು, ಕನಕದಾಸರ ಸಾಹಿತ್ಯದಲ್ಲಿ ಕಂಡುಬರುವ ಮತ್ತೊಂದು ಅತ್ಯಂತ ವೈಶಿಷ್ಟ್ಯಪೂರ್ಣ ರಚನೆಯೆಂದರೆ, "ಮುಂಡಿಗೆ" ಸಾಹಿತ್ಯ ಪ್ರಕಾರ. ಮೊಟ್ಟಮೊದಲ ಬಾರಿಗೆ ಕನಕದಾಸರು ಕಂಡುಹಿಡಿದ ಹೊಸ ಸಾಹಿತ್ಯ ಪ್ರಕಾರವೇ ಈ "ಮುಂಡಿಗೆ"ಯಾಗಿದೆ. ಆ ಕೀರ್ತಿ, ಯಶಸ್ಸು ಎಲ್ಲವೂ ಅವರಿಗೇ ಸಲ್ಲುತ್ತದೆ. ಪದ್ಯಗಳಂತಿರುವ "ಬೆಡಗಿನ ವಚನ"ಗಳನ್ನು, "ಜಾನಪದೀಯ ಒಗಟು"ಗಳನ್ನು ಇದು ಹೋಲುತ್ತದೆ. ಆದರೆ, ಸಾಂಕೇತಿಕ ಶೈಲಿಯಲ್ಲಿದ್ದು, ಒಗಟಿನ ರೂಪದಲ್ಲಿರುತ್ತದೆ. ಗೂಡಾರ್ಥಗಳಿಂದ ಕೂಡಿರುವ ಇಂತಹ ಕೃತಿಗಳನ್ನು ರಚಿಸುವಲ್ಲಿ ದಾಸರು ಬಹಳ ಜಾಣ್ಮೆ, ಗಾಢವಾದ ಪ್ರತಿಭೆ, ಪಾಂಡಿತ್ಯಗಳನ್ನು ಮೆರೆದಿದ್ದಾರೆ.

ಕನಕದಾಸರನ್ನು ಮಾನಸಿಕವಾಗಿ ಯಾತನೆಗೊಳಪಡಿಸಿದವರಿಗೆಲ್ಲಾ ಮತ್ತು ಇವರನ್ನು ಟೀಕೆ ಮಾಡಿದವರ ಬಾಯಿ ಮುಚ್ಚಲು; ಅವರಿಗೆ ಸವಾಲೆಸೆಯುವಂತೆ, ಈ "ಮುಂಡಿಗೆಗಳು" ಕಂಡುಬರುತ್ತವೆ.

"ಕನಕನನ್ನು ಕೆಣಕಬೇಡ, ಕೆಣಕಿ ತಿಣಕಬೇಡ"[77] ಎನ್ನುವ ಗಾದೆ ಮಾತೊಂದೆ ಸೃಷ್ಟಿಯಾಗಿರುವಷ್ಟು ಈ ಸಾಹಿತ್ಯ ಪ್ರಕಾರದ ತೀವ್ರತೆ ಸೂಕ್ಷ್ಮವಾಗಿಂಯೂ, ಹರಿತವಾಗಿಯೂ ಇದೆ. ಮತ್ತು ಈ ಸಾಹಿತ್ಯ ಪ್ರಕಾರವು ತನ್ನೊಳಗೆ ಹೊಂದಿರುವ ಅರ್ಥೈಸಲಾಗದಂತಹ ವಸ್ತು ನಿಗೂಢತೆ, ತತ್ತ್ವಭೂಯಿಷ್ಠತೆಗಳನ್ನು ಸಾರುವುದರ ಜೊತೆ ಜೊತೆಗೇ ಅವರ ಎದುರಾಳಿಗಳಿಗೆ ಕೊಟ್ಟ ಮಾತಿನ ತಿರುಗೇಟು ಇದು.

ಬುದ್ಧಿ ಮತ್ತೆಯ ತೀವ್ರ ಚಿಂತನ, ಭಾಷಾ ಸಿದ್ಧಿಯ ಹೆಗ್ಗುರುತಿಗೆ ಈ ಹೊಸ ಸಾಹಿತ್ಯ ಪ್ರಕಾರದ ಸೃಷ್ಟಿ ದಾಸರದ್ದು. ದಾಸರನ್ನು ಮತ್ತು ಅವರ ಉಪದೇಶವಾಣಿ ಪ್ರೀತಿಸುವವರಿಗೆ ಭಾಷೆ ಸರಳ, ಆದರೆ; ಸಂಕೇತಗಳಿಂದ ಕೂಡಿದ ತತ್ತ್ವಪದ; ಆದರೆ, ದಾಸರನ್ನು ದ್ವೇಷಿಸುವವರು ಮತ್ತು ಅವರನ್ನು ಮಾನಸಿಕವಾಗಿ ಜಾತಿ–ಕುಲಗಳ ಅಂಶವನ್ನೆತ್ತಿ ವಿಡಂಬನೆ ಮಾಡುವವರಿಗೆ ಆಧ್ಯಾತ್ಮಿಕ ಕ್ಷೇತ್ರದ ಒಗಟಿನ ಮಾತು, ರಹಸ್ಯ ಭಾಷೆ, ಧರ್ಮ ನೀತಿ, ಜ್ಞಾನ, ಚಮತ್ಕಾರಗಳಿಂದ ಕೂಡಿದ ಸವಾಲು ಒಟ್ಟಾರೆ, "ಮುಂಡಿಗೆಗಳು" ಎಂಬ ಹೆಸರನ್ನು ಪಡೆದುಕೊಂಡಿದೆ. ಕೆಳವರ್ಗದಿಂದ ಬಂದವರಾದರೂ ಜ್ಞಾನ, ಭಾಷಾ ಪಾಂಡಿತ್ಯ, ನಿರೂಪಣಾ ತಂತ್ರ ಪರಿಣಿತಿ, ಆಧ್ಯಾತ್ಮಿಕ ಪ್ರವೃತ್ತಿಯೊಂದಿಗೆ ಬೆರೆತು ವೈಷ್ಣವ ಭಕ್ತಿಯೊಡನೆ ಸಾಂಕೇತಿಕ ಭಾಷೆಯಿಂದ ಕೂಡಿದ ರಚನೆ ಇದು.

*** ** ***

✣ ✳ ✣ ಅಡಿಟಿಪ್ಪಣಿಗಳು ✣ ✳ ✣


೧. ಶ್ರೀ ಬಿ.ಜಿ. ಸತ್ಯಮೂರ್ತಿ, "ಕ.ದಾ.ಸಾ.", ಪು.೨೦೧, "ಕನಕ ಕಿರಣ"–೧೯೮೨ ಪ್ರಕಟಣೆ.

೨. ಶ್ರೀ ಜಿ.ಎಸ್. ಶಿವರುದ್ರಪ್ಪ, "ಪರಿಶೀಲನ"–೧೯೭೨ ಪ್ರಕಟಣೆ, ಪು.೯೬

೩. ಶ್ರೀ ರಂ.ಶ್ರೀ. ಮುಗುಳಿ, "ಕೀರ್ತನೆಗಳ ಕನಕದಾಸರು"–೧೯೭೦ ಪ್ರಕಟಣೆ, ಪು.೧೩೧

೪. ಶ್ರೀ ರಂ.ಶ್ರೀ. ಮುಗುಳಿ, "ಕೀರ್ತನೆಗಳ ಕನಕದಾಸರು"–೧೯೭೦ ಪ್ರಕಟಣೆ, ಪು.೨೭೨

೫. ಶ್ರೀ ಎಚ್.ಎಸ್. ವೆಂಕಟೇಶ್ ಮೂರ್ತಿ, "ಸಾ.ಸಾ.ಚ."–ಸಂ.೮, ಪು.೩೭

೬. ಡಾ. ದೇ. ಜವರೇಗೌಡರು (ಸಂ), "ಕಸಾದ" ಪು.೫೩೦ ಡಾ. ಡಿ.ಕೆ. ರಾಜೇಂದ್ರ, "ಸಾಹಿತ್ಯದಲ್ಲಿ ಕನಕದಾಸರ ಸ್ಥಾನ", ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ.

೭. ಡಾ. ಡಿ.ಕೆ. ರಾಜೇಂದ್ರ "ಕಸಾದ", "ಸಾಹಿತ್ಯದಲ್ಲಿ ಕನಕದಾಸರ ಸ್ಥಾನ", ಪು.೫೩೩, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ.

೮. ಡಾ. ಡಿ.ಕೆ. ರಾಜೇಂದ್ರ "ಕಸಾದ", "ಸಾಹಿತ್ಯದಲ್ಲಿ ಕನಕದಾಸರ ಸ್ಥಾನ", ಪು.೫೩೬, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ.

೯. ಡಾ. ಡಿ.ಕೆ. ರಾಜೇಂದ್ರ "ಕಸಾದ", "ಸಾಹಿತ್ಯದಲ್ಲಿ ಕನಕದಾಸರ ಸ್ಥಾನ", ಪು.೫೩೮, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ.

೧೦. ಪ್ರೊ. ವಸಂತ ಕುಷ್ಟಗಿ, "ದಾಸಸಾಹಿತ್ಯದ ತವನಿಧಿಯಲ್ಲಿ", ಪು.೧೨೫

೧೧. "ಕನಕದಾಸರ ಕೀರ್ತನೆಗಳು", ಪು. ೧೦೮


✳✳✳ ✳✳ ✳✳✳

## ಇ) ವಸ್ತು ಮತ್ತು ನಿರೂಪಣಾ ಶೈಲಿ

ವಸ್ತುವಿನ ಆಯ್ಕೆಯು ಕವಿಯ ವೈಯಕ್ತಿಕ ಸ್ವಾಭಾವಿಕ ನಡವಳಿಕೆ, ಪ್ರಕೃತಿಯನ್ನು ಆಧರಿಸಿದ್ದರೆ; ನಿರೂಪಣಾ ಶೈಲಿಯು ಒಂದು ತಂತ್ರವಿದ್ದಂತೆ. ವಸ್ತುವಿನ ಆಯ್ಕೆಯಾಗಲಿ, ಅಥವಾ ನಿರೂಪಣಾ ಶೈಲಿಯಾಗಲಿ, ಒಬ್ಬ ಕವಿಯಿಂದ ಮತ್ತೊಬ್ಬ ಕವಿಗೆ ಬದಲಾಗುವುದು ಸಹಜ. ಸಾಮಾನ್ಯವಾಗಿ, "ನಿರೂಪಣಾ ಶೈಲಿ"ಯು ಯಾವಾಗಲೂ "ಕೃತಿಯ ವಸ್ತು"ವನ್ನು ಆಧರಿಸಿರುತ್ತದೆ. "ವಸ್ತುವಿನ ಆಯ್ಕೆ"ಯು ಕವಿಯು ಬಾಳಿ ಬದುಕಿದ ಪರಿಸರವನ್ನು ಆಧರಿಸಿರುತ್ತದೆ. ಇದರೊಂದಿಗೆ ಕವಿ ತನ್ನ ಮನೋಭಾವನೆಗೆ ತಕ್ಕಂತಹ ಛಂದೋರೂಪವನ್ನು ಸ್ಫುರಿಸುತ್ತಾನೆ. ಒಟ್ಟಾರೆ, ಈ ಎಲ್ಲವೂ ಸೇರಿ ರಸ ಪುಷ್ಟಿಗಳಿಂದ ಬರುವ ರೀತಿಯೇ "ಶೈಲಿ"ಯಾಗಿ ಕೀರ್ತನೆಗಳು ಹುಟ್ಟುತ್ತವೆ.[೧] ಶೈಲಿ ಕಾಲಧರ್ಮಕ್ಕನುಸಾರವಾಗಿ ಮತ್ತು ಕೀರ್ತನಕಾರರು ಬಳಸುವ ಭಾಷಾ ಸ್ವರೂಪಕ್ಕನುಗುಣವಾಗಿ ಬದಲಾಗುತ್ತದೆ. ಇಂತಹ ಬದಲಾವಣೆಗಳನ್ನು ನಾವು ಕನಕದಾಸರ ಕಾವ್ಯ ಮತ್ತು ಕೀರ್ತನಗಳಲ್ಲಿ ಗುರ್ತಿಸುತ್ತೇವೆ. ಕನಕದಾಸರ ಬದುಕಿನ ಹಾದಿ ಬದಲಾದಂತೆ ಅವರ ಕಾವ್ಯ, ಕೀರ್ತನೆಗಳ ರೀತಿ,ಮಾರ್ಗವೂ ಬದಲಾಗಿದೆ. ಈ ಶೈಲಿಯ ಬದಲಾವಣೆ ಅನಿವಾರ್ಯ. ಈ ದೃಷ್ಟಿಯಿಂದ ದಾಸ ಪರಂಪರೆಯಲ್ಲೇ ಕನಕದಾಸರ ಶೈಲಿ ವಿಶಿಷ್ಟ ಸ್ಥಾನ ಗಳಿಸಿದೆ.[೨]

ಕನಕದಾಸರ ಮುಖ್ಯ ಉದ್ದೇಶ ಭಕ್ತಿ ನಿರೂಪಣೆಯಾದರೂ; ಮೇಲ್ನೋಟಕ್ಕೆ ವೈಷ್ಣವ ಮತಾನುಯಾಯಿಯಾದಂತೆ ಕಂಡರೂ ಇವರೊಬ್ಬ "ಕ್ರಾಂತಿಕಾರಿ ಹರಿದಾಸರು". ಇವರ "ಸಾಮಾಜಿಕ ಕೀರ್ತನೆ"ಗಳನ್ನು ಒಳಹೊಕ್ಕು ನೋಡಿದಾಗ, ಡಂಬಾಚಾರ, ತೋರಿಕೆಯ ಭಕ್ತಿ, ವೇಷ-ಭೂಷಣಗಳು, ಜಾತಿ-ಮತ-ಧರ್ಮಗಳಿಗೆ ಬಹಿಷ್ಕಾರ ಹಾಕಿ ವಿಶ್ವಭ್ರಾತತ್ವವನ್ನೇ ಸಾರಿದ ಸಾತ್ವಿಕತನದಿಂದ ಆದಿಕೇಶವನನ್ನೇ ನಂಬಿ, "ಭಕ್ತಿಯ ಆಂದೋಲನ"ವನ್ನುಂಟು ಮಾಡಿದುದೇ ಇವರ ವಿಶೇಷ "ಸಾಹಿತ್ಯಕ ಶೈಲಿ"ಯಾಗಿದೆ. ಅಂತೆಯೇ, "ಕ್ರಾಂತಿಕಾರಿ ಶೈಲಿ"ಯ "ಸಮಾಜಮುಖಿ ಕೀರ್ತನೆ"ಗಳ ಸೃಷ್ಟಿಗೆ ಕಾರಣರಾಗಿದ್ದಾರೆ.

ಪೌರಾಣಿಕ ವಸ್ತುವನ್ನಾಧರಿಸಿದ ಕಾವ್ಯಗಳು ಇವರ ಸಂಭಾಷಣಾ ಶೈಲಿ, ಪ್ರತಿಮೆ, ಉಪಮೆ, ಅಲಂಕಾರಗಳು ಅಪೂರ್ವ ಪ್ರತಿಭೆಗೆ ಸಾಕ್ಷಿಯಾಗಿವೆ. ಅವರ ಪ್ರತಿಭೆಯೇ ಶೈಲಿಯಾಗಿ ಇಡೀ ಕಾವ್ಯದುದ್ದಕ್ಕೂ ಮತ್ತು ಪ್ರತಿಯೊಂದು ಸಾಮಾಜಿಕ ಕೀರ್ತನೆಗಳಲ್ಲೂ ತುಂಬಿ ಹರಡಿವೆ.

"ಪುರಂದರದಾಸರಿಗಿಂತಲೂ ಹೆಚ್ಚು ಸ್ವತಂತ್ರವಾದ ವಿಮರ್ಶನ ಧೈರ್ಯ ಕನಕದಾಸರದ್ದು".[೩]

ಕನಕದಾಸರಲ್ಲಿ "ಕವಿ" ಎಂಬ ಎಚ್ಚರವು ಅವರನ್ನು ಪುರಂದರದಾಸರಷ್ಟು ತನ್ಮಯರಾಗಿ ಭಾವದಲ್ಲಿ ತೊಡಗಲು ಬಿಡುವುದಿಲ್ಲ. ಪ್ರಾಸ, ಅನುಪ್ರಾಸ, ಸುಂದರ ಜೋಡಣೆಗಳಿಂದ ಹೆಚ್ಚಿನ ಕೃತಿಗಳು ಆಕರ್ಷಕ ಶಬ್ದ ಚಿತ್ರ-ಣಗಳಂತೆ ಪರಿಣಮಿಸುವುದು.[೪]

ಕನಕದಾಸರು ತಮ್ಮ ಕೃತಿಗಳಲ್ಲಿ ಏಕಾಂತಭಕ್ತಿ, ಸರ್ವಸಮರ್ಪಣ ಮನೋಭಾವ, ಹರಿಸರ್ವೋತ್ತಮತ್ತ್ವಗಳನ್ನು ಪ್ರತಿಪಾದಿಸುತ್ತಾರಾದರೂ ಶಾಸ್ತ್ರ ಜಂಜಡಗಳು, ಮತ-ತತ್ತ್ವ ಪ್ರತಿಪಾದನೆಗೆ ಮನಗೊಡುವುದಿಲ್ಲ. ಆದರೆ, ಸಾಮಾಜಿಕ ಕೀರ್ತನಗೆಳಲ್ಲಿ ಜನತೆಯ ಮೌಢ್ಯ, ಕಂದಾಚಾರ, ಮೂಢನಂಬಿಕೆ, ವರ್ಣ ವ್ಯವಸ್ಥೆಯ ಬಗೆಗಿರುವ ತಮ್ಮ ಅಳಲನ್ನು ಕಟುವಾಗಿ ಟೀಕಿಸುತ್ತಾರೆ ಮತ್ತು ತೀವ್ರವಾಗಿ ಖಂಡಿಸುತ್ತಾರೆ. ಇಂತಹ ಕೃತಿಗಳಲ್ಲಿ ಸ್ಪಷ್ಟವಾಗಿ ಕಾಣಿಸುವ ಅವರ ಶ್ರದ್ಧೆ, ಸೂಕ್ಷ್ಮತೆಯಿಂದ ಕೂಡಿದ ಚಿಂತನೆಗಳು ಅವರ ಹಿರಿಮೆಯನ್ನು ಸಾರುತ್ತವೆ.

ಜಾನಪದ ಭಾಷೆ, ಧಾಟಿ-ಸೊಗಡಿನಿಂದ ತುಂಬಿದ ಅವರ ಕೆಲವು ಕೀರ್ತನೆಗಳು ಅಪೂರ್ವವಾಗಿವೆ. ಇಂತಹ ಕೃತಿಗಳಲ್ಲಿ ಬಳಸಿರುವ ಭಾಷೆ-ಸಾಹಿತ್ಯದೊಡಗೂಡಿ ಓದುಗರಲ್ಲಿ ಸ್ಪಷ್ಟ ಚಿತ್ರಣ ಮೂಡಿಸುತ್ತದೆ.

ಕನಕದಾಸರ ಸಾಹಿತ್ಯ ಕೊಡುಗೆಗಳನ್ನು ನಾವು ಗಮನಿಸುವಾಗ ಎಲ್ಲದಕ್ಕಿಂತಲೂ ವಿಶಿಷ್ಟವಾಗಿ ಬೆಳಕು ಚೆಲ್ಲುವುದು; ಅವರು ಉಳಿದ ಹರಿದಾಸರುಗಳಿಂದ ಇರುವ ಭಿನ್ನತೆಯಿಂದ. ಉಳಿದ ಹರಿದಾಸರುಗಳಿಂದ ಅವರು ಭಿನ್ನರಾಗಿ ಕಾಣುವುದು, ವಿಶಿಷ್ಟವಾಗಿರುವುದು ಅವರ ಕಾವ್ಯಪ್ರಜ್ಞೆಯಿಂದ. ದಾಸರಲ್ಲಿ ಅವರು ಕವಿಗಳಾಗಿರುವುದು. ಸಂಕ್ಷಿಪ್ತವಾಗಿ ಹೇಳುವುದಾದರೆ, ಕನಕದಾಸರ ಸಾಹಿತ್ಯದಲ್ಲಿ ನಾವು ಪ್ರಮುಖವಾಗಿ ಎರಡು ಅಂಶಗಳನ್ನು ಗಮನಿಸುತ್ತೇವೆ. ಅದೇನೆಂದರೆ; "ದಾಸ ಸಾಹಿತ್ಯ" ಎಂಬ ನಾಣ್ಯಕ್ಕೆ "ಭಕ್ತಿ ಸಾಹಿತ್ಯ" ಮತ್ತು "ಕೀರ್ತನ ಸಾಹಿತ್ಯ" ಎಂಬ ಎರಡು ಮುಖಗಳುರುವುದು. "ದಾಸ" ಅಥವಾ "ಸಂತ"ನಾದ ಕವಿಯಿಂದ ಈ ರೀತಿ ಸೃಷ್ಟಿಯಾದ ಸಾಹಿತ್ಯವು ಒಂದು ವಸ್ತುನಿಷ್ಠವಾದುದಾದರೆ; ಮತ್ತೊಂದು, "ವ್ಯಕ್ತಿನಿಷ್ಠ ಸಾಹಿತ್ಯ"ವಾಗಿದೆ.

ಕನಕದಾಸರು ತಮ್ಮ ಕೀರ್ತನೆಗಳಲ್ಲಿ ಬಳಸಿರುವ ದೇಸೀಯತೆ, ಅನುಭಾವ ತುಂಬಿದ ಲೋಕಾನುಭವ, ಉಪಮೆ, ಸಹಜತೆ ವರ್ಣಕ ಕಾವ್ಯಗಳಂತೆ ತೋರುತ್ತದೆ. ಕಾವ್ಯಗುಣ ಪುರಂದರದಾಸರಿಗಿಂತಲೂ ಕನಕದಾಸರಲ್ಲಿ ಒಂದು ಕೈ ಹೆಚ್ಚಾಗಿಯೇ ಇದೆ. ಇದಕ್ಕೆ ಕಾರಣ, ಅವರ "ಕವಿ ಪ್ರಜ್ಞೆ".[೫] ಆದರೆ, ಅವರ ಸಮಾಜ ವಿಮರ್ಶೆ ಬಹಳ ನೇರ, ಮಾತು ಹರಿತ. ಉದಾಹರಣೆಗೆ;

"ತೀರ್ಥವನು ಪಿಡಿದವರು ತಿರುನಾಮಧಾರಿಗಳೇ", "ಬಂದೆವೆಯ್ಯಾ ಗೋವಿಂದ ಸೆಟ್ಟಿ", "ಮರೆಯದಿರು ಎಲೆ ಮಾನವ", ಎಳ್ಳುಕಾಳಿನಷ್ಟು ಭಕ್ತಿಯನ್ನೊಳಗಿಲ್ಲ"...- ಇತ್ಯಾದಿ.

ಕನಕದಾಸರ ಕೃತಿಗಳಲ್ಲಿರುವ ವೈವಿಧ್ಯ, ರಾಗ-ತಾಳಕ್ಕೆ ಸರಿಯಾಗಿ ಮಿಡಿತ ಕನ್ನಡ ನುಡಿ, ದೇಸೀ, ಕವಿತಾ ಮನೋಧರ್ಮ ಎಲ್ಲವೂ ಗುರ್ತಿಸುವಂತಹದ್ದು. ಕೆಲವೊಮ್ಮೆ ಅವರಿಗೆ ಸಂಸ್ಕೃತ ವ್ಯಾಮೋಹ ಬರುವುದೂ ಉಂಟು. ಅಲ್ಲೆಲ್ಲಾ ಅವರಿಗೆ ಇದ್ದಂತಹ ಭಾಷೆಯ ಪ್ರಭುತ್ವ ಗೋಚರವಾಗುತ್ತದೆ.[೬]

ಯಾವುದೇ ಒಬ್ಬ ಮನುಷ್ಯನ ಮೂಲ ಸ್ಥಳವನ್ನು ಕಂಡು ಹಿಡಿಯಬೇಕಾದರೆ, ಆತನು ಬಳಸುವ ಭಾಷೆಯೇ ಸಹಾಯ ಮಾಡುತ್ತದೆ. ಅದೇ ರೀತಿ, ಕನಕದಾಸರಂತಹ ಪ್ರತಿಭಾನ್ವಿತ ಕವಿ ರಚಿಸಿದ ಕೃತಿಗಳಲ್ಲಿರುವ ಅವರ ಪರಿಸರದ ಭಾಷೆಯ ನುಡಿಗಟ್ಟು, ಗಾದೆ– ಇತ್ಯಾದಿಗಳು ಒಂದಲ್ಲ ಒಂದು ರೀತಿಯಲ್ಲಿ ಅಭಿವ್ಯಕ್ತಿಗೊಳ್ಳುತ್ತದೆ. ಉದಾಹರಣೆಗೆ; "ತಾಯಿಸತ್ತ ಮೇಲೆ ತೌರಾಸೆಯೇ", "ಕೋಣನ ಮುಂದೆ ಕಿನ್ನರಿ ಯಾಕೆ", ಅಂಗೈ ಹುಣ್ಣಿಗೆ ಕನ್ನಡಿ ಬೇಕೇ"– ಇತ್ಯಾದಿ.

ಇವರ ಸಾಹಿತ್ಯದಲ್ಲಿ ಗ್ರಾಮ್ಯಪದಗಳನ್ನು ಕಾಣುತ್ತೇವೆ. ಅಂತೆಯೇ, ಜನಪದ ಜೀವನದ ಸಮೃದ್ಧ ಅನುಭವಗಳು ದಟ್ಟವಾಗಿ ಕಾಣಿಸುತ್ತದೆ. ಇದರಿಂದ ಹೆಚ್ಚಾಗಿ ದಾಸರ ಸಾಹಿತ್ಯ ಬಹಳ ಸತ್ವಪೂರ್ಣವೂ, ವೈಶಿಷ್ಟ್ಯಪೂರ್ಣವಾಗಿಯೂ ಇದೆ. ಕನಕದಾಸರ ಕೀರ್ತನೆಗಳಲ್ಲಿ ಜನಪದ ಜೀವನದ ಬಗೆ ಬಗೆಯ ಅನುಭವಗಳು ಹಾಸುಹೊಕ್ಕಾಗಿದ್ದು, ಅವರ ಹಿರಿಮೆಯನ್ನು ಸಾರುತ್ತವೆ. ಜೊತೆಗೆ, ಇವರ ಕೀರ್ತನೆಗಳಲ್ಲಿ ಕಂಡುಬರುವ ಜನಪದ ಸಂಸ್ಕೃತಿಯ ನೈಜ ಚಿತ್ರಣವು ಕೀರ್ತನೆಗಳ ಸತ್ವವನ್ನೂ, ವೈವಿಧ್ಯವನ್ನೂ ಹೆಚ್ಚಿಸಿವೆ.[೭]

ಕನಕದಾಸರು ಕೆಲವು ಸಾಮಾಜಿಕ ಕೀರ್ತನೆಗಳಲ್ಲಿ ಜನಪದ ಗೀತೆಗಳ ಮಟ್ಟುಗಳನ್ನು ನೇರವಾಗಿ ಬಳಸಿಕೊಂಡಿದ್ದಾರೆ.

'ದ್ಯಾವಿ ನಮ್ಮ ದ್ಯಾವರು ಬಂದವ್ರೇ ।
ಬನ್ನೀರೆ ನೋಡ ಬನ್ನೀರೇ ॥'.

'ಎಲ್ಲಿ ನೋಡಿದರಲ್ಲಿ ರಾಮ– ಇದ
ಬಲ್ಲ ಜಾಣರ ದೇಹದಲ್ಲಿ ನೋಡಣ್ಣ ।',

'ಊರಿಗೆ ಬಂದರೆ ದಾಸಯ್ಯ ।
ನಿನ್ನ ಕೇರಿಗೆ ಬಾ ಕಂಡ್ಯ ದಾಸಯ್ಯ॥' – ಇತ್ಯಾದಿ.

"ಗಾದೆಗಳು"; "ಜನಪದ ಸಾಹಿತ್ಯ"ದ ಅತ್ಯಂತ ಸಾರವತ್ತಾದ ಭಾಗ. ಎಲ್ಲಾ ಪ್ರಾಚೀನ ಕವಿಗಳೂ ತಮ್ಮ ಸಾಹಿತ್ಯದಲ್ಲಿ ಗಾದೆಗಳ ಬಳಕೆ ಮಾಡಿದ್ದಾರೆ. ನಯಸೇನನು ಗಾದೆಗಳ ಭಂಡಾರವನ್ನೇ ಸೂರೆ ಮಾಡಿದ್ದಾನೆ. ರಾಘವಾಂಕ, ಕುಮಾರವ್ಯಾಸರು ಹದದಿಂದ ಗಾದೆ ಬಳಸಿದ್ದಾರೆ. ಹೀಗೆ "ಆಡುನುಡಿಯ ಸಹಜ ಸೌಂದರ್ಯ ಗಾದೆಗಳಿಂದ ವರ್ಧಿಸುತ್ತದೆ".[೮] ಉದಾಹರಣೆಗೆ;

'ತಲೆ ಬಲ್ಲಿತೆಂದು ಕಲ್ಲನೆ ಹಾಯಬೇಡ' (ಪು. 106)

'ಕಂಡುದ ನುಡಿದರೆ ಕೋಪವೇ' (ಪು. 162)

'ವಿಷಯಾತುರರಿಗೆ ವಿವೇಕವಿಲ್ಲ' (ಪು. 428) – ಇತ್ಯಾದಿ.

ಅಂತೆಯೇ, "ಜನಪದ ಸಾಹಿತ್ಯ"ದಲ್ಲಿ "ಸೋಬಾನೆ ಪದ" ಒಂದು ಗಣ್ಯ ಸ್ಥಾನ ಪಡೆದಿದೆ. ವಿಶೇಷ ಸಂದರ್ಭಗಳಲ್ಲಿ ಈ ಪದ ಬಳಸದೆ, ಪ್ರಸ್ತಾಪಿಸದೆ; ಕವಿಗೆ ತೃಪ್ತಿಯಿಲ್ಲ.[೯] ಮದುವೆ ವರ್ಣನೆಯ ಪ್ರಸಂಗದಲ್ಲಿ ಜನಪದರ ಜೀವನದಲ್ಲಿ ಕಾಣಿಸುವ ವಿಶೇಷ ಶಾಸ್ತ್ರವಿದು.

ಕನಕದಾಸರು ಜನಪದರ ನಡುವೆ ಬಾಳಿ ಬದುಕಿದವರು ಆದ್ದರಿಂದ ಅವರ ಕೀರ್ತನೆಗಳು ಸಮೃದ್ಧಿಯಾಗಿ ಜಾನಪದದ ಪ್ರಭಾವ ಪಡೆದಿದೆ. ಈ ದೃಷ್ಟಿಯಿಂದಲೇ ಇವರ "ಕೀರ್ತನೆ"ಗಳು ಸಾಂಪ್ರದಾಯಿಕವಾಗಿ ಗಣ್ಯಸ್ಥಾನ ಪಡೆದಿದೆ.

ಇನ್ನು ಇವರ ಸಮಾಜಮುಖಿ ಕೀರ್ತನೆಗಳಲ್ಲಿ ಬರುವ ವಿಡಂಬನಾ ಕೃತಿಗಳಲ್ಲಿ ಜನರ ನಡವಳಿಕೆ, ಸಮಾಜದಲ್ಲಿ ಬೇರುಬಿಟ್ಟಿರುವ ರೂಢಿಗತ "ಸಂಪ್ರದಾಯ", "ವರ್ಣ ವ್ಯವಸ್ಥೆ", "ಉಚ್ಚ-ನೀಚ" ಎಂಬ ತಾರತಮ್ಯ ಇತ್ಯಾದಿಗಳನ್ನು ವಿಡಂಬಿಸಿರುವ ರೀತಿ ಅನನ್ಯ. ವಾಸ್ತವತೆಯ ಕಠೋರ ಸತ್ಯವನ್ನು ಪರಿಣಾಮಕಾರಿ ರೀತಿಯಲ್ಲಿ ಅನಾವರಣಗೊಳಿಸುತ್ತಾರೆ.

ಕನಕದಾಸರ ಕೀರ್ತನೆಗಳು ಮರ್ತ್ಯ, ಅಮರ್ತ್ಯರ ಅಂತರಂಗ-ಬಹಿರಂಗಗಳನ್ನು, ನೋವು-ನಲಿವುಗಳನ್ನು ವೈಯಕ್ತಿಕ ನಿಲುವುಗಳನ್ನು ವಿಮರ್ಶೆ ಮಾಡುತ್ತದೆ.[೧೦]

"ವರ್ಣ ವ್ಯವಸ್ಥೆ"ಯ ಬಗ್ಗೆ ಮಾತ್ರ ಮಾತು ಬಂದಾಗ; ಕನಕದಾಸರು "ಬಂಡಾಯ"ದ ದನಿ ಎತ್ತಿರುವುದು ನಮಗೆ ಅವರ "ಕೀರ್ತನ ಸಾಹಿತ್ಯ"ದ ಮೂಲಕವೇ ಸ್ಪಷ್ಟವಾಗಿ ತಿಳಿಯುತ್ತದೆ. ಆದರೆ ಅವರು "ಪರಿಸ್ಥಿತಿ"ಯ ವಿರುದ್ಧದ ಬಗೆಗೆ ಮಾತ್ರ "ಬಂಡಾಯ"ವೆದ್ದರೇ ಹೊರತು; "ವ್ಯವಸ್ಥೆ"ಯ ವಿರುದ್ಧವಲ್ಲ. ಹೀಗಾಗಿ ಅವರನ್ನು ನಾವು "ಬಂಡಾಯಗಾರರು" ಎಂದು ಭಾವಿಸಿದರೆ; ಅವರ ಸಾಧನೆ ಮತ್ತು ವ್ಯಕ್ತಿತ್ವವನ್ನು ಅಪಮೌಲ್ಯ ಮಾಡಿದಂತೆ. ಅವರ ಕೃತಿಗಳಲ್ಲಿ ನಾವು "ಸಮರ್ಪಣಾ ಭಾವ"ವನ್ನೇ ಕಾಣುತ್ತೇವೆ. "ದೈವ ವಿರುದ್ಧ", "ಕರ್ಮ ವಿರುದ್ಧ", "ತಾಟಸ್ಥ್ಯದ ವಿರುದ್ಧ", "ಜಾತಿ ವಿರುದ್ಧ", "ಹಿಂಸೆ-ನೋವಿ"ನ ವಿರುದ್ಧದ ಚಟುವಟಿಕೆಗಳನ್ನು ನಾವು "ಬಂಡಾಯ ದ್ರವ್ಯ" ಎಂದು ಗುರ್ತಿಸಿದ್ದೇವೆ.[೧೧]

*** ** ***

## ✣ ✳ ✣ ಅಡಿಟಿಪ್ಪಣಿಗಳು ✣ ✳ ✣

೧. ಶ್ರೀ ಬಿ.ಜಿ. ಸತ್ಯಮೂರ್ತಿ, "ಕನಕಕಿರಣ"– "ಕನಕದಾಸರು ಮತ್ತು ಶೈಲಿ", ಪು.೨೦೪, ೧೯೮೨– ಪ್ರಕಟಣೆ.

೨. ಶ್ರೀ ಬಿ.ಜಿ. ಸತ್ಯಮೂರ್ತಿ, "ಕನಕಕಿರಣ"– "ಕನಕದಾಸರು ಮತ್ತು ಶೈಲಿ", ಪು.೨೦೪, ೧೯೮೨– ಪ್ರಕಟಣೆ.

೩. ಶ್ರೀ ರಂ.ಶ್ರೀ. ಮುಗುಳಿ, "ಕೀರ್ತನೆಗಳ ಕನಕದಾಸರು", ಪು.೧೩೧

೪. ಶ್ರೀ ಎಚ್. ಎಸ್. ವೆಂಕಟೇಶ್ ಮೂತಿಖು, "ಕೀರ್ತನಕಾರರು", –"ಸಾ.ಸ.ಚ" ಸಂ–೮, ಪು.೩೭

೫. ಡಾ. ಎನ್. ಕೆ. ರಾಮಶೇಷನ್, " ಹರಿದಾಸ ಆಂದೋಲನ", ಪು.೨೦೪

೬. ಡಾ. ಎನ್. ಕೆ. ರಾಮಶೇಷನ್, " ಹರಿದಾಸ ಆಂದೋಲನ", ಪು.೨೦೮

೭. ಡಾ. ಜೀ.ಶಂ. ಪರಮಶಿವಯ್ಯ "ಕನಕದಾಸರ ಕೃತಿಗಳಲ್ಲಿ ಜಾನಪದ ಅಂಶಗಳು", ಪು.೬೦೭– "ಕಸಾದ"–ಸಂ–೧

೮. ಡಾ. ಜೀ.ಶಂ. ಪರಮಶಿವಯ್ಯ "ಕನಕದಾಸರ ಕೃತಿಗಳಲ್ಲಿ ಜಾನಪದ ಅಂಶಗಳು", ಪು.೬೨೧– "ಕಸಾದ"–ಸಂ–೧

೯. ಶ್ರೀ ತ.ಸು. ಶ್ಯಾಮರಾವ್, "ಕನ್ನಡ ಸಾಹಿತ್ಯ ಚರಿತ್ರೆ", ಪು.೪೪೧

೧೦. ಡಾ. ಪದ್ಮಾಶೇಖರ್, "ಕನಕದಾಸರ ಕೃತಿಗಳಲ್ಲಿ ವಿಡಂಬನೆ", ಪು. ೬೩೩

೧೧. ಡಾ. ಹಿ.ಶಿ.ರಾಮಚಂದ್ರೇಗೌಡ, "ಕನಕದಾಸರಲ್ಲಿ ಬಂಡಾಯದ ದನಿ", "ಕಸಾದ", ಪು.೬೬೩

✳✳✳ ✳✳ ✳✳✳

## ಅಧ್ಯಾಯ – ೩: ಸಾಮಾಜಿಕ ಪರಿಸರ ಮತ್ತು ಹಿನ್ನೆಲೆ

ಕನ್ನಡ ನಾಡಿನ ಇತಿಹಾಸದಲ್ಲೇ "ವಿಜಯನಗರ" ಸಾಮ್ರಾಜ್ಯವು "ಸುವರ್ಣಯುಗ" ಎಂದೇ ಗುರ್ತಿಸಲ್ಪಟ್ಟಿದೆ. ಈ ಅವಧಿಯಲ್ಲಿ ಬಾಳಿ ಬದುಕಿದ ಕನಕದಾಸರು ಈ ಸಾಮ್ರಾಜ್ಯದ ಏಳು-ಬೀಳುಗಳನ್ನು ಸ್ವತಃ ಕಣ್ಣಾರೆ ಕಂಡಿದ್ದಾರೆ. ದಕ್ಷಿಣಭಾರತದಲ್ಲಿ "ಹೊಯ್ಸಳ" ಸಾಮ್ರಾಜ್ಯದ ಅವನತಿಯ ನಂತರ ಸೃಷ್ಟಿಗೊಂಡ ಈ ಸಾಮ್ರಾಜ್ಯವು ಉತ್ತರದಿಂದ ಬಂದ ಮುಸ್ಲಿಮರ ದಾಳಿಗಳನ್ನು ತೀವ್ರವಾಗಿ ಎದುರಿಸಬೇಕಾಯಿತು. ಇಂತಹ ಅನೇಕ ದಾಳಿಗಳು ಪವಿತ್ರ ಹಿಂದೂ ಸಂಪ್ರದಾಯಸ್ಥ ಜನರ ಧರ್ಮ, ಸಂಸ್ಕೃತಿಗಳ ಮೇಲೆ ಕೆಟ್ಟ ಪರಿಣಾಮ ಬೀರಿತು. ಇದೂವರೆವಿಗೂ ಪೋಷಿಸಿಕೊಂಡು ಬಂದಿದ್ದಂತಹ ಧರ್ಮ-ಸಂಸ್ಕೃತಿಯಿಂದ ಕೂಡಿದ ಜೀವನ ಮೌಲ್ಯಕ್ಕೆ ಧಕ್ಕೆ ಉಂಟಾಗುವುದನ್ನು ತಪ್ಪಿಸುವ ಸಲುವಾಗಿ ಒಂದು ಬಲಾಢ್ಯ ಪ್ರಯತ್ನದ ಅವಶ್ಯಕತೆಯಿತ್ತು. ಈ ಕಾರಣದಿಂದಲೇ ನಿರ್ಮಾಣವಾದ ಸಾಮ್ರಾಜ್ಯವೇ "ವಿಜಯನಗರ". ಸುಮಾರು ೯೦ ವರ್ಷಗಳ ದೀರ್ಘ ಕಾಲ ಬಾಳಿದ ಕನಕದಾಸರು ತಮ್ಮ ಕಣ್ಣಾರೆ ಕಂಡಂತಹ ಸಮಕಾಲೀನ ಸಾಮಾಜಿಕ ಚಿತ್ರಣಗಳನ್ನು ತಮ್ಮ ಕೃತಿಯಲ್ಲಿ ಸ್ಪಷ್ಟವಾಗಿಯೂ, ಯಥಾವತ್ತಾಗಿಯೂ ನೀಡಿರುವುದನ್ನು ನಾವು ಕಾಣುತ್ತೇವೆ. "ವಿಜಯನಗರ"ದ ಪಾಳೇಗಾರರಾಗಿ, ಸೈನಿಕನಾಗಿ, ದಂಡನಾಯಕನಾಗಿ ಸಾಮ್ರಾಜ್ಯವು ವೈಭವದ ಅತ್ಯಂತ ಉನ್ನತ ಉತ್ತುಂಗ ಶಿಖರವೇರಿರುವುದನ್ನೂ ಕಂಡಂತೆಯೇ; ಕೃಷ್ಣದೇವರಾಯನ ಆಳ್ವಿಕೆಯ ನಂತರ ಸಾಮ್ರಾಜ್ಯವು ದುರಾಡಳಿತ, ಭ್ರಷ್ಟಾಚಾರಗಳಿಗೆ ಒಳಗಾಗಿ ಇಡೀ ಸಮಾಜವೇ ನೊಂದು-ಬೆಂದು ಕ್ಷಣ ಕ್ಷಣಕ್ಕೂ, ದಿನದಿಂದ ದಿನಕ್ಕೂ ಕ್ಷೀಣಿಸುತ್ತಾ ಹೋಗುವ ದುಃಖಕರ ಸನ್ನಿವೇಶಗಳನ್ನೂ ಕಂಡಿದ್ದಾರೆ. ಅದನ್ನೆಲ್ಲಾ ತಮ್ಮ ಕೃತಿಗಳಲ್ಲಿ ಮೂಡಿಸಿದ್ದಾರೆ.

ಕೇವಲ "ಕೀರ್ತನೆ"ಗಳು ಮಾತ್ರವಲ್ಲ; ಅದರ ಜೊತೆಗೆ "ಕಾವ್ಯ" ರಚಿಸುವ ಮೂಲಕ "ದಾಸಸಾಹಿತ್ಯ" ಪರಂಪರೆಗೆ ಒಂದು ಮಿಗಿಲಾದ ಘನತೆ ತಂದುಕೊಟ್ಟ ಕೀರ್ತಿ, ಯಶಸ್ಸು, ವೈಶಿಷ್ಟ್ಯತೆ ಇವರದು; ಅಂತೆಯೇ, ತಮ್ಮ ಸಾಮಾಜಿಕಪ್ರಜ್ಞೆಯ ಮೂಲಕ ನಮ್ಮ ಕನ್ನಡನಾಡಿನ "ಸಾಹಿತ್ಯ" ಪರಂಪರೆಗೆ ಒಂದು ಘನವಾದ ವೈಶಿಷ್ಟ್ಯ ತಂದುಕೊಟ್ಟ ಕೀರ್ತಿ, ಗೌರವ, ಯಶಸ್ಸೂ ಇವರಿಗೇ ಸಲ್ಲುತ್ತದೆ. ಜೊತೆಗೆ ತಮ್ಮ ಕೃತಿಗಳಲ್ಲಿ ಅಭಿವ್ಯಕ್ತಿಗೊಳಿಸಿರುವ ಸಾಮಾಜಿಕ ಸಂವೇದನೆಗಳು ಕಲಾತ್ಮಕವಾಗಿ ಗೋಪ್ಯಗೊಳಿಸುವ ವಿಶಿಷ್ಟ ಪ್ರತಿಭಾ ತಂತ್ರವು- ಇವರ ಕೃತಿಗಳನ್ನು ಅನ್ಯ ಕವಿಗಳ, ದಾಸರ ಕೃತಿಗಳಿಗಿಂತಲೂ ಪ್ರತ್ಯೇಕಗೊಳಿಸುತ್ತದೆ.

ಕನಕದಾಸರೊಬ್ಬರು ದೃಷ್ಟಾರನಾದ ಕವಿ. ಇಂತಹವರಿಂದ ಸೃಷ್ಟಿಯಾದ ಕೃತಿಗಳು "ಯುಗಧರ್ಮ"ದ "ಸಮಕಾಲೀನ ಪ್ರಜ್ಞೆಯ ಪ್ರತಿಕೃತಿ"ಗಳಿದ್ದಂತೆ ಇವೆ.

ಸಾಹಿತ್ಯಕ ಸಂದರ್ಭದಲ್ಲಿ ಸಾಮಾಜಿಕತೆಯ ಪರಿಕಲ್ಪನೆಯೇ ಒಂದು ಜಟಿಲವಾದ ಹಾಗೂ ಅತ್ಯಂತ ಸಂಕೀರ್ಣವಾದ ವಿಚಿತ್ರ ಪರಿಕಲ್ಪನೆ. ಸಮಾಜ ಎನ್ನುವುದು ಅಸಂಖ್ಯಾತ ಅಣುಗಳಿಂದ ರೂಪಗೊಂಡ ದ್ರವ ಹಾಗೂ ಘನ ವಸ್ತುಗಳಿಂದಲೇ ಹಲವಾರು ಸೂಕ್ಷ್ಮ ಹಾಗೂ ಸ್ಥೂಲ ಘಟಕಗಳಿಂದ ವಿಭಿನ್ನ ಸ್ತರದಲ್ಲಿ, ವಿಭಿನ್ನ ರೀತಿಯಲ್ಲಿ ಆಕಾರಗೊಂಡದ್ದು; ಅದರಂತೆ ಬಾಹ್ಯ ಪರಿಸರದಿಂದಾಗಿ ಕಾಲಕಾಲಕ್ಕೆ ವಿವಿಧ ಹಂತಗಳಲ್ಲಿ ರೂಪ ವ್ಯತ್ಯಾಸಗೊಳ್ಳುತ್ತಾ ಹೋಗುವಂತಹದ್ದು. ಒಂದು ಸಮಾಜದಲ್ಲಿಯ ಆ ಎಲ್ಲ ಘಟಕಗಳ ಪರಸ್ಪರ ಕ್ರಿಯೆ– ಪ್ರತಿಕ್ರಿಯೆ ಒಟ್ಟು ಪರಿಣಾಮಗಳ ಸ್ವರೂಪ.[೧]

ಕನಕದಾಸರ ಕೀರ್ತನೆಗಳನ್ನು ನಾವು ಮೂಲಭೂತವಾಗಿ ದೇವತಾ ಸ್ತುತಿ, ಗುರುಸ್ತುತಿ, ಆತ್ಮ ಚರಿತ್ರೆ, ಜ್ಞಾನ–ಭಕ್ತಿ–ವೈರಾಗ್ಯ, ಸಮಾಜ ಚಿಂತನೆ ಅಥವಾ ನೀತಿಬೋಧೆ, ವೈಚಾರಿಕತೆ, ತಾತ್ವಿಕತೆ– ಎಂಬ ಭಾಗಗಳಾಗಿ ಮಾಡಬಹುದಾಗಿದೆ. ಇವರು ತಮ್ಮ ಆತ್ಮೋದ್ಧಾರದ ಜೊತೆ ಜೊತೆಗೇ ಸಮಾಜೋದ್ಧಾರಕ್ಕಾಗಿ ಹಗಲಿರುಳೂ ಬಹಳ ಶ್ರಮವಹಿಸಿ, ದೇಹದಂಡಿಸಿ ದುಡಿದಿರುವುದನ್ನು ಕಾಣುತ್ತೇವೆ: ಆದರೆ ಪ್ರಾಚೀನ ಕಾಲದಲ್ಲಿದ್ದಂತಹ ಪಂಪಾದಿ ಕವಿಗಳ ಸಾಹಿತ್ಯ ಕೃತಿಗಳಲ್ಲಿ ಸಾಮಾಜಿಕತೆ ಅನುಷಂಗಿಕ. ಇನ್ನು ಜೈನಕವಿಗಳ ಸಾಹಿತ್ಯ ಕೃತಿಗಳಂತೂ ಅವರ ಮತದ ಕುರಿತಾದ ಮತಪ್ರಚಾರವೇ ಹೆಚ್ಚಾಗಿ ಕಂಡುಬರುವುದರ ಜೊತೆಗೆ "ಪರಮತ ವಿಡಂಬನೆ"ಯೇ ಹೇರಳವಾಗಿದೆ. ಇಂತಹ ಕೃತಿಗಳಲ್ಲಿರುವ ನಿರೂಪಣೆಯು "ಮಾನವನ ಮೂಲಭೂತ ಗುಣ–ಸ್ವಭಾವ ರಾಗ–ದ್ವೇಷ"ಗಳೆಂದು ಎತ್ತಿತೋರಿಸುತ್ತವೆ. ನಂತರ ಬಂದಂತಹ ವೀರಶೈವ ಮತ್ತು ವೈದಿಕ ಕವಿಗಳ ದೇಸೀಯ ಸಾಹಿತ್ಯದಲ್ಲಿ ಸಮಕಾಲೀನ ಜೀವನದ ಸೊಗಸಾದ ಚಿತ್ರಣ ಕಾಣುತ್ತೇವೆ. ಅದಾದ ನಂತರ, ಭಾಗವತ ಪಂಥದ ಹರಿದಾಸರ ಸಮಾಜಪ್ರಜ್ಞೆಯಂತೂ ಜನರಲ್ಲಿ ಭಕ್ತಿಯನ್ನು ತುಂಬುದುದರೊಂದಿಗೆ ತೃಪ್ತಿ ಹೊಂದುತ್ತದೆ. ಆದರೆ ಈ ಎಲ್ಲಾ ಅಂಶಗಳನ್ನೂ ಮೀರಿ, ಕನಕದಾಸರ ಕೀರ್ತನೆಗಳಲ್ಲಿ ಮಾತ್ರ ನಾವು ವಿಶೇಷವಾಗಿ ಸಾಮಾಜಿಕಪ್ರಜ್ಞೆಯೇ ಮೂಲ ಆಶಯವಾಗಿರುವುದನ್ನು ಕಾಣುತ್ತೇವೆ.

ಕನಕದಾಸರು ಸಮಾಜದಲ್ಲಿನ ಕ್ಷುದ್ರದೇವತೆಗಳ ಉಪಾಸನೆ, ಬಲಿ ಕೊಡುವ ಸಂಪ್ರದಾಯ, ಮದ್ಯಪಾನ, ಬೆತ್ತಲಸೇವೆ ಇತ್ಯಾದಿ ಮೌಢ್ಯ–ದುಷ್ಟ ಸಂಪ್ರದಾಯಗಳನ್ನು ತಮ್ಮ ಕೀರ್ತನೆಗಳಲ್ಲಿ ಬಲವಾಗಿ ವಿರೋಧಿಸುತ್ತಾರೆ. "ಮಗನೊಬ್ಬನಿಂದ ಮಾತ್ರ ಮೋಕ್ಷ" ಎಂದು ಹೇಳುವ ಕ್ರೂರಶಾಸ್ತ್ರವನ್ನು ಪ್ರತಿಭಟಿಸುತ್ತಾರೆ. ಸಮಾಜದ ಸದಸ್ಯನಾಗಿದ್ದುಕೊಂಡು ಮಾನವನು ಗಳಿಸುವ ಸಾಮರ್ಥ್ಯಗಳೇ ಸಂಸ್ಕೃತಿ.[೨] ಎಂದು ಹೇಳುವ ಕನಕದಾಸರ ನೈತಿಕ ಧೈರ್ಯ ಮತ್ತು ಸತ್ಯನಿಷ್ಠುರತೆ ಅಸಮಾನ್ಯ. ಕನಕದಾಸರ ಕೀರ್ತನೆಗಳು, ಕಾವ್ಯಗಳಲ್ಲಿ ಸಾಮಾಜಿಕತೆಯೇ ಅವುಗಳ ಕೇಂದ್ರಪ್ರಜ್ಞೆಯಾಗಿ ಕೊನೆಯವರೆವಿಗೂ ಉಳಿಯುತ್ತದೆ. ಮತ್ತು ಅವರ ಸಾಮಾಜಿಕ ಪ್ರಜ್ಞೆ ಮುಗ್ಧ ಅಜ್ಞಾನಿಗಳಿಗೆ ಮಾಡುವ ಉಪದೇಶದ ಮಟ್ಟಕ್ಕೂ, ಕಿಡಿಗೇಡಿಗಳಿಗೆ ಬೈದು ಬುದ್ಧಿ ಹೇಳುವ ಮಟ್ಟಕ್ಕೂ, ಇಲ್ಲವೆ ಸಾಮಾಜಿಕ ಸೌಲಭ್ಯಗಳಿಂದ ವಂಚಿತರಾದ ದೀನರಿಗೆ ಕರ್ಮವಾದವನ್ನು ಮುಂದೆ ಮಾಡಿ ಸಾಂತ್ವನ ಸೂಚಿಸುವ ಮಟ್ಟದಲ್ಲೂ ಇರುವಂತೆ ಕಾಣಿಸುತ್ತದೆ.[೩]

ಕನಕದಾಸರ ಸಾಮಾಜಿಕ ಕೀರ್ತನೆಗಳಲ್ಲಿ ಸಾಮಾಜಿಕ ದೋಷಗಳೇ ಮುಂದಾಗಿ ಟೀಕೆ, ಉಪದೇಶ, ವಿಡಂಬನೆ ರೂಪದಲ್ಲಿ ನಿಲ್ಲುತ್ತದೆ. ವಿಮರ್ಶೆಯಾಗುವುದಿಲ್ಲ. ಸಮಾಜದಲ್ಲಿನ "ಮೇಲು-ಕೀಳು", "ಬಡವ-ಬಲ್ಲಿದ" ಎಂಬ ತಾರತಮ್ಯ ಪ್ರತಿಯೊಂದು ಜಾತಿಯಲ್ಲಿರುವುದನ್ನೂ ಪತ್ತೆ ಹಚ್ಚಿದ್ದಾರೆ. ಮೇಲ್ವರ್ಗದವರ ಮತಾಂಧತೆ, ಅಹಂಕಾರ-ಪ್ರತಿಷ್ಠೆ, ಬೂಟಾಟಿಕೆ-ಆಡಂಬರಗಳು ಕೆಳವರ್ಗದವರ ಅಜ್ಞಾನ, ಅಂಧಶ್ರದ್ಧೆ, ಶೋಷಣೆ, ಮೂಢನಂಬಿಕೆಯಿಂದ ಕೂಡಿದ ಅನಿಷ್ಟ ಪದ್ಧತಿಗಳು ಇವರ ಸಾಮಾಜಿಕ ಕೀರ್ತನೆಗಳ ವಿಷಯವಾಗಿವೆ.

ಕನಕದಾಸರ ಸಾಮಾಜಿಕ ಕೀರ್ತನೆಗಳಲ್ಲಿ ಕಂಡು ಬರುವ ಸಾಮಾಜಿಕಪ್ರಜ್ಞೆಯು ದಾಸರು ಸ್ವತಃ ವೈಯಕ್ತಿಕವಾಗಿ ಅನುಭವಿಸಿದ ಅಂದರೆ; ಸಮಾಜದಿಂದ ತಮಗೆ ಮಾತ್ರ ಒದಗಬಹುದಾದ ವ್ಯಕ್ತಿಗತ ಅನುಭವಗಳ ಅಂಚನ್ನು ಮೀರಿನಿಲ್ಲುತ್ತವೆ.

"ಸಮಾಜ" ಎಂದ ಮೇಲೆ ಬಗೆಬಗೆಯ ವಿವಿಧ ವರ್ಗಗಳು, ಸ್ತರಗಳು, ಅನಿವಾರ್ಯ. ಆದರೆ ಪರಸ್ಪರ ಒಂದನ್ನೊಂದು ದೂಷಿಸದೆ; ಶೋಷಿಸದೆ, ದ್ವೇಷಿಸದೇ ಸೌಹಾರ್ದಯುತವಾಗಿರುವುದೇ ಮುಖ್ಯ. ಇದಕ್ಕೆ "ಭಾವೈಕ್ಯತೆ"ಯ ಭಾವನೆ ಎನ್ನುತ್ತಾರೆ. ಅದೇ ಇಲ್ಲಿ ಬಹಳ ಅತ್ಯವಶ್ಯಕವಾಗಿದೆ.- ಇದೇ ಕೂಡಾ ಕನಕದಾಸರ ಉದಾರ ತುಂಬಿದ ಸಾತ್ವಿಕ ಆಶಯವಾಗಿತ್ತು. ವಿಶೇಷವೆಂದರೆ, ಅಂದಿನ ಕಾಲದ ಸಮಾಜದಲ್ಲಿ ಕೇವಲ ಕೆಳವರ್ಗದ ಜನರಲ್ಲಿ ಮಾತ್ರವಲ್ಲ; ಮೇಲ್ವರ್ಗದ ಜನರಲ್ಲೂ ಅನೇಕ ಅನಾಚಾರ, ಅನಿಷ್ಟ ಪದ್ಧತಿಗಳು ರೂಢಿಯಲ್ಲಿತ್ತು. ಇದಕ್ಕೆಲ್ಲಾ ಕನಕದಾಸರ ಸಮಾಜಮುಖಿ ಕೀರ್ತನೆಗಳು ಒಂದು ನಿದರ್ಶನವೆಂಬಂತಿದೆ. ಅವು ಒಂದೊಂದೂ ಕೂಡಾ ಅವರ ವೈಯಕ್ತಿಕ ಬದುಕಿನ ಅಂಶಗಳನ್ನು ಮೊದಲುಗೊಂಡು ಸಮಾಜದ ಎಲ್ಲಾ ಸ್ತರಗಳ ಪಾರ್ಶ್ವಗಳೆಲ್ಲದರ ಶೋಧನೆಗೆ ತೊಡಗುವ, ಸಂಸ್ಕರಿಸುವ ಮಹಾತ್ವಾಕಾಂಕ್ಷೆಯನ್ನೇ ಪ್ರದರ್ಶಿಸುತ್ತದೆ.[೪] ತಮ್ಮ ಸಾಮಾಜಿಕ ಕೀರ್ತನೆಗಳಲ್ಲಿ ಕನಕದಾಸರು ವಿಡಂಬಕರಾಗಿ, ಕಾವ್ಯಗಳಲ್ಲಿ ಸಾಮಾಜಿಕಪ್ರಜ್ಞೆ ಹೊಂದಿದ ವಿಮರ್ಶಕರಾಗಿ ಕಾಣುತ್ತಾರೆ.

*** ** ***

✣ ⁜ ✣ **ಅಡಿಟಿಪ್ಪಣಿಗಳು** ✣ ⁜ ✣

೧. **ಡಾ. ಎಸ್. ಎಸ್. ಕೋತಿನ, "ಕಸಾದ" ಸಂ-೧, "ಕನಕದಾಸರ ಕೃತಿಗಳಲ್ಲಿ ಸಾಮಾಜಿಕ ನೆಲೆ", ಪು.೬೮೧**

೨. **ಡಿ. ಎಚ್. ಮಲ್ಲಿನಾಥಯ್ಯ (ಅನು) "ಸಮಾಜಶಾಸ್ತ್ರ ಕೈಪಿಡಿ" ಸಂ-೧, ಪು.೪೮.**

೩. **ಡಾ. ಎಸ್. ಎಸ್. ಕೋತಿನ, "ಕಸಾದ" ಸಂ-೧, "ಕನಕದಾಸರ ಕೃತಿಗಳಲ್ಲಿ ಸಾಮಾಜಿಕ ನೆಲೆ", ಪು.೬೮೩**

೪. **ಡಾ. ಎಸ್. ಎಸ್. ಕೋತಿನ, "ಕಸಾದ" ಸಂ-೧, "ಕನಕದಾಸರ ಕೃತಿಗಳಲ್ಲಿ ಸಾಮಾಜಿಕ ನೆಲೆ", ಪು.೬೯೪**

*** ** ***

## ಅ) ಸಾಮಾಜಿಕಪ್ರಜ್ಞೆಯ ಕೀರ್ತನೆಗಳು

ಯಾವ ಕೃತಿಯೇ ಆಗಲಿ, ಅದು ಸಾಮಾಜಿಕ ಸಂದರ್ಭದಲ್ಲಿಯೇ ಮೂಡುವುದು ಅನಿವಾರ್ಯವಾದ್ದರಿಂದ ಸಾಮಾಜಿಕತೆಯ ಸೋಂಕಿನೊಳಗೆ ಅದು ಸೃಷ್ಟಿಯಾಗುತ್ತದೆ. ಆಗೆಲ್ಲಾ ಕೃತಿಯೊಳಗೆ ಬಿಚ್ಚಿಕೊಳ್ಳುವ ದಾಸರ ಸಾಮಾಜಿಕಪ್ರಜ್ಞೆಯು ಅನೇಕ ಪದರಗಳುಳ್ಳ ಅಗಾಧ ಪರ್ವತದಂತೆಯೂ, ಬೃಹತ್ ಸರೋವರದಲ್ಲಿ ಏಳುವ ದೊಡ್ಡ ದೊಡ್ಡ ಅಲೆಗಳೋಪಾದಿಯಲ್ಲಿ ಸಂಕೀರ್ಣವೂ, ವಿಫುಲವೂ ಆಗಿದೆ. ಕನಕದಾಸರ ಸಮಾಜಿಕಪ್ರಜ್ಞೆ ತಮ್ಮ ಸಮಕಾಲೀನ ಬದುಕಿನ ವಿವಿಧ ಮುಖಗಳ ವಾಸ್ತವ ವಿವರಣೆಗೆ ತಮ್ಮನ್ನು ಸೀಮಿತಗೊಳಿಸಿಕೊಳ್ಳುವುದಿಲ್ಲ.[೨] ಇವರ ಕೃತಿಗಳಲ್ಲಿರುವ ಸಾಮಾಜಿಕ ಅನ್ವೇಷಣೆ, ವಿಮರ್ಶೆ ಆ ಕೃತಿಗಳ ಹಿಂದಿರುವ ಸಾಮಾಜಿಕ ಪ್ರೇರಣೆ-ಪ್ರಚೋದನೆಗಳ ಮೂಲಕವಾಗಿ ಅಂದಿನ ಕಾಲದ ಸಾಮಾಜಿಕ ಪರಿಸರ-ಪರಂಪರೆಗಳಿಗೆ ಸ್ಪಂದಿಸುವ ಕವಿಯ ಮನೋಧರ್ಮ ಇತ್ಯಾದಿಗಳ ಮೂಲಕವಾಗಿ ಮತ್ತು ಕವಿಯ ಅಭಿವ್ಯಕ್ತಿಯ ಹಿಂದಿರುವ ಒತ್ತಡ ಹಾಗೂ ಆತಂಕ ಇತ್ಯಾದಿಗಳ ಮೂಲಕ ನಡೆದಿರುವುದು ಕಂಡು ಬರುತ್ತದೆ.[೧] ಕನಕದಾಸರ ಸಾಮಾಜಿಕ ಪ್ರಜ್ಞೆಯು ಜಾತಿ-ಮತ, ಧರ್ಮ-ಪರಂಪರೆ, ಸಂಸ್ಕೃತಿ, ಭಾಷೆ, ಸಮಕಾಲೀನ ಜೀವನ ಪರಿಸ್ಥಿತಿ-ಗತಿಗಳು ಇತ್ಯಾದಿಗಳ ವಿಷಯದಲ್ಲಿ ಅನುಭವ-ಸಂವೇದನೆಗಳ ನಿರೂಪಣೆಯಾಗಿ ವಿಡಂಬನೆ, ವಿಮರ್ಶೆಯಾಗಿ, ಉಪದೇಶವಾಗಿ ಹಲವು ಬಗೆಗಳಲ್ಲಿ ಪ್ರಕಟಗೊಳ್ಳುತ್ತದೆ.[೩] ಸಾಮಾಜಿಕಪ್ರಜ್ಞೆಯ ಕೀರ್ತನೆಗಳಲ್ಲಿ ಕನಕದಾಸರ ಅನುಭವ ವೈಯಕ್ತಿಕ ನೆಲೆಯದಾದಾಗ ಅಭಿವ್ಯಕ್ತಿಯಲ್ಲಿ ಭಾವನಾತ್ಮಕತೆ ಪ್ರಧಾನವಾಗಿರುತ್ತದೆ; ಸಾಮಾಜಿಕ ಹಿತಾಸಕ್ತಿಯ ನೆಲೆಯದಾದರೆ ವೈಚಾರಿಕತೆ ಪ್ರಧಾನಗೊಳ್ಳುತ್ತದೆ. ಸಾಮಾಜಿಕಪ್ರಜ್ಞೆಯ ನೆಲೆಗಳನ್ನು ಒಳಗೊಂಡ ಯಾವುದೇ ಒಂದು ಕೃತಿ ಅಂದಿನ ಕಾಲದ ಸಾಮಾಜಿಕ ಪರಿಸರದ ವ್ಯಕ್ತರೂಪವಾದಂತೆ ಆ ಕವಿಯ ವ್ಯಕ್ತಿತ್ವದ ಪ್ರಕಟರೂಪವೂ ಆಗಿರುತ್ತದೆ.[೪]

*** ** ***

**✣ ⁜ ✣ ಅಡಿಟಿಪ್ಪಣಿಗಳು ✣ ⁜ ✣**

೧. **ಡಾ.ಎಸ್.ಎಸ್. ಕೋತಿನ, "ಕಸಾದ",ಸಂ-೧, "ಕನಕದಾಸರ ಕೃತಿಗಳಲ್ಲಿ ಸಾಮಾಜಿಕ ನೆಲೆ", ಪು.೬೮೨**

೨. **-----""----- ಪು. ೬೯೧**

೩. **---""----**

೪. **-----"""------, ಪು.೬೮೨**

*** ** ***

## ೧. 'ಜಾತಿಪದ್ಧತಿ' ಮತ್ತು 'ವರ್ಗ ವೈಷಮ್ಯ'

ಅಂದಿನ ಕಾಲದ ಸಮಾಜದಲ್ಲಿ "ಜಾತಿಪದ್ಧತಿ" ಬಹಳ ಜಟಿಲಗೊಂಡು ಆಳವಾಗಿ ಬೇರೂರಿತ್ತು. "ಮೇಲು-ಕೀಳು" ಎಂಬ ತಾರತಮ್ಯ ಕೇವಲ ಶ್ರೀಮಂತಿಕೆಯ ವಿಷಯದಲ್ಲಷ್ಟೇ ಅಲ್ಲ; ಅದಕ್ಕಿಂತಲೂ ಹೆಚ್ಚಾಗಿ ಜಾತಿ-ಕುಲಗಳ ಬಗೆಗಿತ್ತು. ಹೀಗಾಗಿ ಕನಕದಾಸರ ಸಮಕಾಲೀನ ಸಮಾಜದಲ್ಲಿ "ಸ್ಪೃಶ್ಯ-ಅಸ್ಪೃಶ್ಯ" ಭಾವನೆಗಳು ಜನರಲ್ಲಿ ಅವರ ರೂಢಿ-ಸಂಪ್ರದಾಯಗಳಲ್ಲಿ ಹಾಸುಹೊಕ್ಕಿತ್ತು. ಕನಕದಾಸರು ವ್ಯಾಸರಾಜರ ಬಳಿ ಬಂದು ಅವರ ಶಿಷ್ಯತ್ವ ವಹಿಸಿದ ಮೇಲೆ "ಶ್ರೇಷ್ಠಕುಲ ಸಂಜಾತ"ರೆಂದು ತಾವೇ ನಂಬಿಕೊಂಡಿದ್ದ ಕೆಲವು ಮಡಿವಂತ ಶಿಷ್ಯರು ಕನಕರನ್ನು "ನೀನು ಯಾವ ಕುಲ ?" ಎಂದು ಪ್ರಶ್ನಿಸಿ ಅವರ ಮನಸ್ಸನ್ನು ನೋಯಿಸುತ್ತಿದ್ದರು. ಆಗ ದಾಸರು ನೀಡಿದಂತಹ ಉತ್ತರ ಒಂದು ಕೀರ್ತನೆಯ ರೂಪದಲ್ಲಿದೆ;

'॥ ಕುಲ ಯಾವುದು ಸತ್ಯವುಳ್ಳ ಜನರಿಗೆ । ಕೆಸರೊಳು ತಾವರೆ ಹುಟ್ಟಲು ಅದ ತಂದು ।
ಬಿಸಜನಾಭನಿಗೆ ಅರ್ಪಿಸಲಿಲ್ಲವೆ । ಹಸುವಿನ ಮಾಂಸದೊಳು ಉತ್ಪತ್ತಿಯಾದ ಕ್ಷೀರವ ।
ವಸುಧೆಯೊಳಗೆ ಭೂಸುರರು ಉಣಲಿಲ್ಲವೆ ॥
ಆತ್ಮ ಯಾವ ಕುಲ । ಜೀವ ಯಾವ ಕುಲ ।
ಆತ್ಮ-ಅಂತರಾತ್ಮನೆಲೆಯಾದಿಕೇಶವ ।
ಆತನು ಒಲಿದ ಮೇಲೆ ಯಾತರ ಕುಲವಯ್ಯಾ ॥[೧]

'॥ ಕುಲ ಕುಲ ಕುಲವೆಂದು ಹೊಡೆದಾಡದಿರಿ । ನಿಮ್ಮ ಕುಲದ ನೆಲೆಯನೇನಾದರೂ
ಬಲ್ಲಿರಾ ? ।
ಹುಟ್ಟಿದ ಯೋನಿಗಳಿಲ್ಲ ಮೆಟ್ಟದ ಭೂಮಿಗಳಿಲ್ಲ । ಜಲವೆ ಸಕಲ ಕಾಲಕ್ಕೆ ತಾಯಿ । ಜಲದ
ಕುಲವನೇನಾದರೂ ಬಲ್ಲಿರಾ ।
ಶ್ರೀಕಾಗಿನೆಲೆ ಆದಿಕೇಶವನ ಚರಣ ಕಮಲವ ಕೀರ್ತಿಸುವವನೆ ಕುಲಜ ॥[೨]

"ಯಾವ ಕುಲ ?" ಎನ್ನುವುದೊಂದು ಪ್ರಶ್ನೆಯಾದರೆ; "ಶ್ರೇಷ್ಠ ಯಾವುದು ?" ಎನ್ನುವುದು ಎರಡನೆಯದು. "ಮೇಲ್ವರ್ಗ-ಕೆಳವರ್ಗ" ಕಲ್ಪನೆಯಿಂದ ಹಾರಾಡುತ್ತಿದ್ದ ಮೌಢ್ಯಾಂಧರ ಕಿರುಕುಳ ಸಹಿಸಿಕೊಳ್ಳಲು ಅಸಾಧ್ಯವಾಗಿ ಅಂತಹವರ ಒಳಕಣ್ಣು ತೆರೆಸಲು ತಮ್ಮ ಈ ಕೀರ್ತನೆಯ ಮೂಲಕ ಅವರಿಗೆ ಉತ್ತರ ಕೊಟ್ಟಿದ್ದಾರೆ.

ಕನಕದಾಸರು ಕುಲವನ್ನು ಮೀರಿದ ಭಗವಂತನ ಸೃಷ್ಟಿಯ ರಹಸ್ಯವನ್ನು ಹೀಗೆ ಹೇಳಿದ್ದಾರೆ,

'॥ ಯಾತರ ಕುಲವೆಂದು ಉಸುರಲಿ ।
ಜಗನ್ನಾಥ ಮಾಡಿದನೊಂದು ನರರೂಪವಯ್ಯಾ ॥
ಇಂದ್ರಿಯ ಸೂತಕ ದುರ್ಗಂಧ ಮಲ ಮೂತ್ರ ।
ಬಂದ ಠಾವಿನ ನಿಜಗುರುತನರಿಯದೆ ॥'

"ವರ್ಗವೈಷಮ್ಯ" ಕೇವಲ ಜಾತಿಗೆ ಮಾತ್ರ ಸೀಮಿತಗೊಳ್ಳದೆ ಕೆಳವರ್ಗದ ಬಡಜನರನ್ನೂ ಅಪಾರವಾಗಿ ಹಿಂಸೆಗೆ ಗುರಿ ಮಾಡತೊಡಗಿತ್ತು. ಸಹಜವಾಗಿ ಮೇಲ್ವರ್ಗದಲ್ಲಿದ್ದ ಶ್ರೀಮಂತರು ಕೆಳವರ್ಗದ ಬಡವರನ್ನು ಮತ್ತಷ್ಟು ಅಸಹಾಯಕರನ್ನಾಗಿ ಮಾಡಿ, ನಿರಂತರ ಅವರನ್ನು ತೀವ್ರವಾಗಿ ಶೋಷಣೆಗೆ ಗುರಿ ಮಾಡುತ್ತಲೇ ಇದ್ದರು. ಇದರ ಪರಿಣಾಮದಿಂದಾಗಿ ಸಮಾಜದಲ್ಲಿ ಕಳ್ಳತನ, ಕೊಲೆ-ಸುಲಿಗೆ, ದರೋಡೆಗಳು ಹೆಚ್ಚಾಗಿ ನಡೆಯುತ್ತಲೇ ಇದ್ದು, ದುರ್ಜನರು, ದುಷ್ಟರ ಸಂಖ್ಯೆ ಅಧಿಕವಾಗುತ್ತಿತ್ತು. ಅದಕ್ಕಾಗಿಯೇ ಕನಕದಾಸರು;



'॥ ಸಂನ್ಯಾಸಿ ಜಂಗಮ ಜೋಗಿ ಜಟ್ಟಿ ಮೊಂಡ ವೈರಾಗಿ ।
ನಾನಾ ವೇಷಗಳೆಲ್ಲಾ ಹೊಟ್ಟೆಗಾಗಿ । ಗೇಣು ಬಟ್ಟೆಗಾಗಿ ।
ಹಳ್ಳದಲ್ಲಿ ಕುಳಿತುಕೊಂಡು ಕಲ್ಲು ದೊಣ್ಣೆ ಹಿಡಿದುಕೊಂಡು ।
ಕಳ್ಳತನ ಮಾಡುವುದು ಹೊಟ್ಟೆಗಾಗಿ । ಗೇಣು ಬಟ್ಟೆಗಾಗಿ ॥
ವೇದಶಾಸ್ತ್ರ ಓದಿಕೊಂಡು ಪಂಚಾಂಗ ಹಿಡಿದುಕೊಂಡು ಅನ್ಯರಿಗೆ ।
ಬೋಧನೆಯ ಮಾಡುವುದು । ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥ [೨]

ಕಪಟ, ವಂಚನೆ, ಮೋಸ, ಲಂಚಗುಳಿತನದಿಂದ ಕೂಡಿದ ಸಮಾಜಕ್ಕೆ ದಾಸರು ನೀಡಿದ ವಿಡಂಬನೆಯಿಂದ ಕೂಡಿದ ನೀತಿಬೋಧೆ ಇದು;

'॥ ಮೋಸದಿ ಜೀವನ ಘಾಸಿ ಮಾಡಿದ ಪಾಪ ।
ಕಾಶಿಗೆ ಹೋದರೆ ಹೋದೀತೆ ? ।
ನ್ಯಾಯವ ಬಿಟ್ಟು ಅನ್ಯಾಯವ ಪೇಳುವ ।
ನಾಯಿಗೆ ನರಕವು ತಪ್ಪೀತೇ ? ।
ತಾಯಿ ತಂದೆಗಳ ನೋಯಿಸಿದವನಿಗೆ ।
ಮಾಯದ ಮರಣವು ತಪ್ಪೀತೇ ? ।
ಭಾದಿಸಿ ಪರರ ಅರ್ಥವ ದೋಚುವವಗೆ ।
ವ್ಯಾಧಿಯು ಕಾಡದೆ ಬಿಟ್ಟೀತೇ ? ।[೪]

–ಹೀಗೆ ಸಮಾಜದಲ್ಲಿರುವ ಇಂತಹ ದುಷ್ಟರನ್ನು ಎಚ್ಚರಿಸುವ ರೀತಿಯಲ್ಲಿ ಉಪದೇಶಿಸಿರುವುದು ನಮಗೆ ತಿಳಿಯುತ್ತದೆ. ಅಂದಿನ ಕಾಲದ ಸಮಾಜದಲ್ಲಿ ಚತುರ್ವರ್ಣಗಳೇ ಪ್ರಧಾನವಾಗಿತ್ತಾದರೂ; ಹಲವಾರು ಉಪಜಾತಿಗಳು ಉದ್ಭವಿಸಿ ವಿಪರೀತ ಗೊಂದಲಮಯವಾದ ವಾತಾವರಣವನ್ನೇ ಉಂಟುಮಾಡಿತ್ತು. ಪರಿಣಾಮವಾಗಿ ಜನತೆಗೆ ಅಜ್ಞಾನ, ಅಂಧಶ್ರದ್ಧೆ, ಮೂಢನಂಬಿಕೆಗಳು ಹೆಚ್ಚಾಗಿ ಅವರ ಆಚಾರ–ವಿಚಾರಗಳಲ್ಲಿ ಅನೇಕ ನ್ಯೂನ್ಯತೆಗಳು ಸೇರಿದ್ದು; ಇದರಿಂದಾಗಿ ಪ್ರಾಣಿಬಲಿಯಂತಹ ದುಷ್ಟ ಪದ್ಧತಿ, ಸುರಪಾನ–ಇತ್ಯಾದಿ ಅನಾಚಾರಗಳು ಹೆಚ್ಚು ಹೆಚ್ಚಾಗಿ ಕಂಡುಬರತೊಡಗಿದಾಗ ದಾಸರು ;

'॥ ವ್ಯರ್ಥವಾಯಿತಲ್ಲ ಜನ್ಮವು ಸಾರ್ಥಕವಾಗಲಿಲ್ಲ ।
ಅರ್ಥದಾಸೆಯಲಿ ವೃದ್ಧಿಯೊಳಗೆ ಸುತ್ತಿ ।
ಮತ್ತನಾಗಿ ಬಲು ಹೀನ ಕೃತ್ಯಗಳನು ಮಾಡಿ ।
ಶ್ವಾನಗಿಂತಲು ಬಲು ಮಾನಗೆಟ್ಟು ನಾ ।
ದೀನನಾಗಿ ಮನೆಮನೆಗಳ ತಿರುಗಿ ॥' [೫]

'॥ ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕಿಂತ ।
ಸುಜ್ಞಾನಿಗಳ ಕೂಡೆ ಜಗಳವೆ ಲೇಸು ।
ಮಸೆಯುತಿಹ ಮತ್ಸರದ ನೆರೆಯೊಳು ಇರುವುದಕ್ಕಿಂತ ।
ಹಸನಿಲ್ಲದ ಹಾಳು ಗುಡಿಯೇ ಲೇಸು ।
ಉಂಬುಡುವುದಕ್ಕಿಲ್ಲದರಸಿನೋಲಗಕ್ಕಿಂತ ।
ತುಂಬಿದೂರೊಳಗೆ ತಿರಿದುಂಬುವುದೆ ಲೇಸು ॥' [೬]

– ಎನ್ನುವಂತಹ ಕಿವಿಮಾತನ್ನು ಮುಗ್ಧ ಜನರಿಗೆ ಕೊಡುವುದರ ಮುಖಾಂತರ ಅವರು ಮೋಸಗಾರರಿಂದ ವಂಚನೆಗೊಳಗಾಗುವುದನ್ನು ತಪ್ಪಿಸಲು ಪ್ರಯತ್ನಿಸಿರುವುದನ್ನು ನಾವಿಲ್ಲಿ ಕಾಣುತ್ತೇವೆ.

*** ** ***

✣ ⁂ ✣ **ಅಡಿಟಿಪ್ಪಣಿಗಳು** ✣ ⁂ ✣

೧. "ಕಸಾದ", ಪು.೧೮೯, ಪದ್ಯ–೨೦೧
೨. "ಕಸಾದ", ಪು.೧೯೦, ಪದ್ಯ–೨೦೨
೩. "ಕಸಾದ", ಪು.೧೫೨, ಪದ್ಯ–೧೭೫
೪. "ಕಸಾದ", ಪು.೧೬೮, ಪದ್ಯ–೧೮೦
೫. "ಕಸಾದ", ಪು.೧೪೦, ಪದ್ಯ–೧೫೧
೬. "ಕಸಾದ", ಪು.೧೫೭, ಪದ್ಯ–೧೬೯

*** ** ***

## ೨. 'ವೇಶ್ಯಾ ಪದ್ಧತಿ, ದೇವದಾಸಿ ಪದ್ಧತಿ, ಬಹುಪತ್ನಿತ್ವ ಮತ್ತು ಸಹಗಮನ ಪದ್ಧತಿ'

ಕನಕದಾಸರ ಸಮಕಾಲೀನ ಸಮಾಜದಲ್ಲಿ "ವೇಶ್ಯಾಪದ್ಧತಿ", "ದೇವದಾಸಿ ಪದ್ಧತಿ" ಮತ್ತು "ಬಹುಪತ್ನಿತ್ವ ಪದ್ಧತಿ"ಗಳು ಅರಸರು ಮತ್ತು ಕೆಲವು ಶ್ರೀಮಂತರುಗಳಲ್ಲಿ ರೂಢಿಯಲ್ಲಿತ್ತೆಂದು ನಮಗೆ ತಿಳಿದು ಬರುತ್ತದೆ.

'॥ ಹೇವವಿಲ್ಲದ ಹೆಣ್ಣು ಗಜುಗ ಬೆಳೆದ ಕಣ್ಣು ।
ಸೇವೆಯರಿಯದ ದಣಿಯು ಕಲ್ಲಿನಾ ಕಣಿಯು ।
ಶರ್ಮವಿಲ್ಲದ ಗಂಡು ಕರಿಯ ಒನಕೆಯ ತುಂಡು ।
ಮರ್ಮವಿಲ್ಲದ ಮಾತು ಒಡಕು ಮಡಕೆ ತೂತು ॥'[೧]

'॥ ಕರಕೆಯಿಲ್ಲದ ಬಾಳು ಕರಿವರದನ ದಯೆ ಕೇಳು ।
ಅರಿತವರಿರೆ ಮನೆಯೊಳು ಅದು ಸ್ವರ್ಗವು ಕೇಳು ।
ಕಂಡರೆ ಸೇರದ ನಾರಿ ಕೆಂಡವನುಗುಳುವ ಮಾರಿ ।
ಪರನಾರಿಯರ ಒಡನಾಟ ಗರಲವನಟ್ಟುಂಬಾಟ ।
ಕರೆ ಬರಲರಿರಯದ ಗಂಡ ಅವ ನಾಚಿಕೆ ಭಂಡ ।
ಸವತಿಯರೊಳಗೆ ಒಣ ಕೂಟ ಏಳು ನಾಗರ ಕಾಟ ॥'[೨]

ಕನಕದಾಸರು ಇಲ್ಲಿ ನೀಡಿರುವ ಉಪದೇಶ ಅವರಲ್ಲಿರುವ ಸಾಮಾಜಿಕಪ್ರಜ್ಞೆಗೆ ದ್ಯೋತಕವಾಗಿದೆ.

'॥ ತಾಳ ದಂಡಿ ಶೃತಿ ಮೇಳ ತಂಬೂರಿಯು ಹಿಡಿದುಕೊಂಡು ।
ಸೂಳೆಯಂತೆ ಕುಣಿಯುವುದು ಹೊಟ್ಟೆಗಾಗಿ । ಗೇಣು ಬಟ್ಟೆಗಾಗಿ ॥'[೩]

'॥ ಹೀನ ಮನುಜಗೆ ಜ್ಞಾನವ ಬೋಧಿಸೆ । ಹೀನ ವಿಷಯ ಅಳಿದ್ಹೋದೀತೇ ।
ಮಾನಿನಿ ಮನಸಿದು ನಿಧಾನವಿರದಿರೆ । ಮಾನಾಭಿಮಾನಗಳು ಉಳಿದೀತೇ ॥[೪]

'॥ ಹಂಬಲಿಸಿ ಭವದ ಸುಖ ಮೆಚ್ಚಿದಾತನ ಸಂಗ ।
ರಂಭೆಯರ ನೋಡಿ ಮೋಹಿಪನ ಸಂಗ ।
ದುರ್ಜನರ ಸಂಗ ಎಂದೆಂದಿಗೂ ಒಲ್ಲೆ ॥'[೫]

‘॥ ಸತಿಯಿದ್ದು ಪರಸತಿಯ ಬಯಸುವವನೆ ದ್ರೋಹಿ ।
ಸತಿಯನ್ನು ಪರರ ವಶಗೈವವನೆ ದ್ರೋಹಿ ॥’[೬]

‘॥ ದುರ್ಮಾರ್ಗದಲಿ ನಡೆದವಗೆ ಘೋರ ವ್ಯಾಧಿ ।
ಪರಸತಿಯ ಕಾಮಿಸಿದವಗೆ ಪಾಂಡು ರೋಗವು ।
ಸತಿಯರಿಗೆ ಅಳುಪಿದಾತಗೆ ಮೂತ್ರ ಕೃಚು ।
ಪರಿವೃತೆಯರ ಪೀಡಿಸಿದವಗೆ ಅತಿಸಾರ ॥’[೭]

‘॥ ಸಾರಿ ದೂರಿ ಹೇಳುತೇನೆ ಕೆಟ್ಟಿ ಕಂಡ್ಯ ಬಡ್ಡಿ ಮನವೆ ।
ಸ್ತ್ರೀಯರನ್ನು ಕಂಡು ನೀನು ಬಯಸದಿರು ಮರುಳು ಮನವೆ ॥’[೮]

‘॥ ಜ್ಞಾನವಿಲ್ಲದೆ ನೂರು ಕಾಲ ಬದುಕಲ್ಯಾತಕೆ ।
ಮಾನಹೀನನಾಗಿ ಬಾಳ್ವ ಮನುಜನ್ಯಾತಕೆ ।
ಸೋತ ಹೆಣ್ಣಿಗೆ ಓತು ನಡೆಯದ ಪುರುಷನ್ಯಾತಕೇ ॥’[೯]

–ಹೀಗೆ "ಆಧ್ಯಾತ್ಮದ ಚೌಕಟ್ಟಿಲ್ಲದ ಐಹಿಕ ಜೀವನ ಕಟ್ಟು ಹರಿದ ಪಂಜಿನಂತಾಗುತ್ತದೆ." ಎನ್ನುವ ಸಂದೇಶವನ್ನು ಕನಕದಾಸರು ಸಾರುವಾಗ ಅವರಲ್ಲಿರುವ "ನೈತಿಕಪ್ರಜ್ಞೆ" ಮತ್ತು "ಸಾಮಾಜಿಕ ನಿಲುವು" ಅವರ "ಸಾಮಾಜಿಕ ಪ್ರಜ್ಞೆ"ಯ ಮೇರು ಪತಾಕೆಯನ್ನೇ ಹಾರಿಸಿದಂತಿದೆ.

ಅಬ್ದುಲ್ ರಜಾಕ್, ಬಾರ್ಬೋಸಾ ಮೊದಲಾದ ವಿದೇಶಿ ಪ್ರವಾಸಿಗರ ಬರಹಗಳಲ್ಲಿ ಕಂಡು ಬರುವಂತೆ ಕನಕದಾಸರ ಸಮಕಾಲೀನ ಸಮಾಜದಲ್ಲಿ "ಸಹಗಮನ ಪದ್ಧತಿ"ಯೂ ಜಾರಿಯಲ್ಲಿತ್ತು[೧೦] ! ಜಾನಪದ ಲಾವಣಿಗಳು ಮತ್ತು ಕೆಲವು ಶಾಸನಗಳಿಂದಲೂ ಈ ಬಗ್ಗೆ ಕೆಲವು ಮಾಹಿತಿಗಳನ್ನು ಉಲ್ಲೇಖಿಸಿರುವುದನ್ನು ನಾವು ಕಾಣುತ್ತೇವೆ.

✳✳✳ ✳✳ ✳✳✳

## ✣ ⁂ ✣ ಅಡಿಟಿಪ್ಪಣಿಗಳು ✣ ⁂ ✣

೧. "ಕಸಾದ", ಪು.೧೫೯, ಪದ್ಯ-೧೭೦

೨. "ಕಸಾದ" ಪು.೧೬೦, ಪದ್ಯ-೧೭೧

೩. "ಕಸಾದ", ಪು.೧೬೨, ಪದ್ಯ-೧೭೫

೪. "ಕಸಾದ", ಪು.೧೬೮, ಪದ್ಯ-೧೮೦

೫. "ಕಸಾದ", ಪು.೧೭೨, ಪದ್ಯ ೧೮೩

೬. "ಕಸಾದ" ಪು.೧೭೩, ಪದ್ಯ-೧೮೪

೭. "ಕಸಾದ", ಪು.೧೭೪, ಪದ್ಯ-೧೮೫

೮. "ಕಸಾದ", ಪು.೧೮೬, ಪದ್ಯ-೧೯೭

೯. "ಕಸಾದ", ಪು.೧೮೪, ಪದ್ಯ-೧೯೫

೧೦. ಪರಮೇಶ, "ಕನಕ ಕಿರಣ", ಸಂ-೧, "ಕನಕದಾಸರ ಕಾಲದ ಸಾಮಾಜಿಕ ಹಿನ್ನೆಲೆ" ಪು.೫೪,೫೪

✳✳✳ ✶✶ ✳✳✳

## ೩. ‘ಮೂಢನಂಬಿಕೆ’, ‘ಅಜ್ಞಾನ’, ‘ಅಂಧಶ್ರದ್ಧೆ’, ‘ಮೌಢ್ಯ’, ‘ಕಂದಾಚಾರ’

ಮಠಗಳು, ದೇವಲಾಯಗಳು ವಿದ್ಯೆ-ಸಂಸ್ಕೃತಿ ಹಾಗೂ ಕಲೆಗಳ ಕೇಂದ್ರವಾಗಿತ್ತು. "ವಿದ್ಯಾದಾನ" ಎಲ್ಲಕ್ಕಿಂತಲೂ ಮಿಗಿಲಾದ ಶ್ರೇಷ್ಠದಾನ ಎಂಬ ಭಾವನೆ ಜನರಲ್ಲಿತ್ತು. ಅಂತೆಯೇ, ಸಾಮಾಜಿಕ ಅಸಮಾನತೆಗಳು ಆ ಕಾಲದಲ್ಲಿ ಮತ್ತಷ್ಟು ಪ್ರಬಲವಾಗಿದ್ದವು.

ಉದಾಹರಣೆಗೆ :- ಬ್ರಾಹ್ಮಣರಿಗಾಗಿ ರಾಜಾಶ್ರಯದಲ್ಲಿ ಸೃಷ್ಟಿಗೊಂಡ ಅಗ್ರಹಾರಗಳು, ಬ್ರಹ್ಮಸ್ವಗಳು ಸಾವಿರಾರು ಇದ್ದವು. ವರ್ಣಧರ್ಮಕ್ಕೆ ಅತೀ ಪ್ರೋತ್ಸಾಹ ದೊರೆತಿತ್ತು. ಹಣಕಾಸಿನ ಚಲಾವಣೆಯ ಹೆಚ್ಚಳ, ಅತಿಯಾಗಿ ಬೆಳೆದುನಿಂತ ಅಧಿಕಾರಿ, ಆಡಳಿತ ವರ್ಗ, ಬಿಡುವಿಲ್ಲದ ಯುದ್ಧಗಳಿಂದಾಗಿ ಆರ್ಥಿಕ ಒತ್ತಡ ಹೆಚ್ಚಾಗಿ ಜನತೆ ತತ್ತರಿಸಿಹೋಗಿತ್ತು. ವಿಜಯನಗರ ಸಾಮ್ರಾಜ್ಯ ಹಿಂದೆಂದೂ ಕಂಡು ಕೇಳರಿಯದಂತಹ ಜಾತಿ, ಉಪಜಾತಿಗಳ ಹುಟ್ಟಿನೊಂದಿಗೆ ಸಮಾಜ ಭಿನ್ನ-ಭಿನ್ನವಾಗಿ ಛಿದ್ರವಾದಂತಾಯಿತು.[1] ಇದನ್ನು ಅನೇಕ ಶಾಸನಗಳೂ ಕೂಡಾ ನಿರೂಪಿಸುತ್ತವೆ.

-ಇಂತಹ ಸಾಮಾಜಿಕ ಪರಿಸರದಲ್ಲಿದ್ದ ಭ್ರಷ್ಟಾಚಾರಗಳ ವಿರುದ್ಧ ಕನಕದಾಸರು ಖಂಡಿಸಿದ್ದಾರೆ ಮತ್ತು ಹೋರಾಡಿದ್ದಾರೆ. ಕಲುಷಿತ ಸಮಾಜವನ್ನು ತಿದ್ದಿ ಸರಿಪಡಿಸುವ ಸಲುವಾಗಿ ಮತ್ತು ಸಮಾಜದ ಇಂತಹ ವಾತಾವರಣವನ್ನು ಸದುಪಯೋಗಪಡಿಸಿಕೊಂಡು ತಮ್ಮ ಅನುಕೂಲಕ್ಕೆ ತಕ್ಕಂತೆ ಮಾರ್ಪಡಿಸಿಕೊಂಡು ಮುಗ್ಧ ಜನರನ್ನು ಅಜ್ಞಾನಿಗಳಂತೆ ಮಾಡಿ ಅಜ್ಞಾನ, ಅಂಧಶ್ರದ್ಧೆ, ಮೌಢ್ಯತನವನ್ನು ತುಂಬುವುದರೊಂದಿಗೆ ಹಣವನ್ನು ಕೊಳ್ಳೆಹೊಡೆದ ದುರ್ಮಾರ್ಗಿಗಳ ತಂಡವೇ ಇದ್ದು, ಅದು ಅಟ್ಟಹಾಸದಲ್ಲಿ ಮೆರೆಯುತ್ತಿತ್ತು. ಅಂತಹವರ ಕಪಿಮುಷ್ಟಿಯಿಂದ ಸಾತ್ವಿಕ ಜನರನ್ನು ಕಾಪಾಡುವ ಸಲುವಾಗಿ ಕನಕದಾಸರು ತಮ್ಮ ಕೀರ್ತನೆಗಳ ಮೂಲಕ ಬೆಳಕು ಚೆಲ್ಲಿದ್ದಾರೆ. ಮತ್ತು ಕಷ್ಟದಿಂದ ಬಳಲಿ ನಿರಾಸೆಗೊಂಡವರಿಗೆ ಆತ್ಮವಿಶ್ವಾಸ ತುಂಬಲು; ‘॥ ತಲ್ಲಣಿಸದಿರು ಕಂಡ್ಯ ತಾಳು ಮನವೆ । ಎಲ್ಲರನು ಸಲಹುವನು ಇದಕೆ ಸಂಶಯ ಬೇಡ ॥[2] – ಎನ್ನುವ ಸಾಂತ್ವನ ತುಂಬಿದ್ದಾರೆ. ಅಂತೆಯೇ, "॥ ಕಲಿಯುಗದ ಮಹಿಮೆಯನು ಕಂಡಷ್ಟು ಪೇಳುವೆನು । ಸತ್ಯಧರ್ಮಗಳೆಲ್ಲ ಎತ್ತ ಪೋದವೋ ಕಾಣೆ ।

ಉತ್ತಮರ ಜೀವನಕೆ ದಾರಿಯಿಲ್ಲ । ನಿತ್ಯದಲಿ ಕಳವು ವ್ಯಭಿಚಾರವುಳ್ಳವರೆಲ್ಲ । ಅರ್ಥ

ಸಂಪನ್ನರಾಗನುಭವಿಸುತಿಹರು ॥

ವಾವೆವರಸೆಯು ತಪ್ಪಿ ವೈರಿ ವರ್ಗವು ಹೆಚ್ಚಿ । ಕೇವಲಾಧಮರೆಲ್ಲ ಸಿರಿ ಮದದಿ ಸೊಕ್ಕಿದರು ।

ಕಾವರಾರೈ ಸಾಧು ಸಜ್ಜನರನೀಗ ॥

ವೇದ ವಿದುರು ತಮ್ಮ ವೃತ್ತಿ ಸ್ವಾಸ್ಥ್ಯವ ಕಳೆದು । ಆಧಾರವಿಲ್ಲದೆ ತಿರಿದು ತಿಂಬುವರು ॥

ಕಾದುಕ ಶೂರರಿಗೆ ಕಾಸು ಕೊಡುವವರಿಲ್ಲ । ಮೇದಿನಿಗೆ ಬೀಳ್ವ ಖಂಡಮಂಡಲವು ॥

ಅನ್ನವಸ್ತ್ರಗಳಿಂದ ಚೆನ್ನಾಗಿ ಬಾಳುವರ । ಭಿನ್ನ ತಂತ್ರವ ಮಾಡಿ ಕೆಡಿಸುತಿಹರು ॥

ಗನ್ನಗತಕವ ಮಾಳ್ಪ ಗ್ರಾಮಣ್ಯಗಳ ಕಲಿತು । ಕುನ್ನಿಗಳು ಹೆಚ್ಚಿದರು ಕ್ರೂರ ಫಣಿಯಂತೆ ॥

ಆಳಿದೊಡೆಯಂಗೆರಡು ಬಗೆಯುವಾತಗೆ ಬಳ್ಳೆ । ಮಾಳಿಗೆಯ ಮನೆ ತುರುವು

ಧನಧಾನ್ಯವು ॥

ವೇಳೆವೇಳೆಗೆ ಬರುವ ಹೆಂಡತಿಯ ಲೆಕ್ಕಿಸದೆ । ಸೂಳೆಯನು ನೆಚ್ಚಿ ಕಾಲವ ಕಳೆವರಯ್ಯ ॥

ಉತ್ತಮ ಪತಿವ್ರತೆಯು ಪತಿ ನೀನೆ ಗತಿಯೆನಲು । ಮುತ್ತೈದೆಗುಡುವುದಕೆ ವಸ್ತ್ರವಿಲ್ಲ ।

ಮತ್ತೆ ವ್ಯಭಿಚಾರಿಣಿಗೆ ತೊಡಿಗೆ ಬಂಗಾರುಗಳು । ವರ್ಣನೆಯಿದೇನಯ್ಯ ಕಲಿಯುಗದ

ಮಹಿಮೆ ॥

ಪತಿವ್ರತೆಯರೆಂಬುವರು ಶತಸಹಸ್ರಕ್ಕೊಬ್ಬರು । ಮಿತಿಮೀರಿ ಇಹರಯ್ಯ ಇತರ ಜನರು ॥

ಮತಿಗೆಟ್ಟು ಮನಸೋತು ಅನ್ಯ ಪುರುಷರ ಕೂಡಿ । ಗತಿಗೆಟ್ಟು ಹೋಗುವರು ಮೂರು

ತೊರೆದು ॥'[೨]

– ಈ ರೀತಿಯಾಗಿ ಮೂಢನಂಬಿಕೆ, ಅಜ್ಞಾನ, ಅಂಧಶ್ರದ್ಧೆ, ಮೌಢ್ಯ, ಕಂದಾಚಾರಗಳ ವಿರುದ್ಧ ಕನಕದಾಸರಲ್ಲಿದ್ದಂತಹ ಕಿಚ್ಚು, ಆತ್ಮವಿಶ್ವಾಸ, ಅಂತಃಸತ್ವಗಳನ್ನು ನಾವು ಗಮನಿಸಬೇಕು.

"ಡಾಂಭಿಕತ"ನದ ಭಕ್ತಿ, "ಬೂಟಾಟಿಕೆ", "ಆಡಂಬರ"–ಇಂತಹವುಗಳನ್ನು ಕನಕದಾಸರು ಸ್ವಲ್ಪವೂ ಸಹಿಸುತ್ತಿರಲಿಲ್ಲ. ಈ ಅಂಶಗಳಿಂದಾಗಿ ಸಮಾಜದಲ್ಲಿ ನಡೆಯುತ್ತಿದ್ದಂತಹ ಅನ್ಯಾಯಗಳನ್ನು ತಡೆಯಲು ಪ್ರಯತ್ನಿಸಿದ್ದಾರೆ. ಮತ್ತು ಮುಗ್ಧ ಜನರಿಗೆ ಮೋಸ ಹೋಗದಂತೆ ಎಚ್ಚರಿಕೆಯ ಮಾತನ್ನೂ ಹೇಳಿದ್ದಾರೆ.

'॥ ನೇಮವಿಲ್ಲದ ಹೋಮವೇತಕೆ ।ರಾಮನಾಮವಿರದ ಮಂತ್ರವ್ಯಾತಕೆ ॥ ವಾರಕೊಂದುಪವಾಸ

ಮಾಡಲೇಕೆ ।

ನೀರ ಮುಣುಗಲು ಏಕೆ ನಾರಿಯಳ ಬಿಡಲೇಕೆ। ಘೋರಪಾತಕವೆಲ್ಲ ತೊಲಗಿ ಹೋಗುವುದೆ ।

ಡಂಭಕ ವೃತ್ತಿಯಲಿ ಇರಲೇತಕೆ । ಅಂಬರವ ತೊರೆಯಲ್ಯಾಕೆ ತಾಂಬೂಲ ಬಿಡಲೇಕೆ ॥

ಬಂಧದೊಳಗೆ ಬಿದ್ದು ಹರಿಯನೆ ನೆನೆಯುತಿರೆ । ಬೆಂದು ಹೋಗುವುದು ದುರಿತಂಗಳೆಲ್ಲ ॥'[೪]

– ಲೋಕಾನುಭವಿಯಾದ ಅನುಭಾವಿ ಕನಕದಾಸರು ಶಕ್ತರು ಅಶಕ್ತರನ್ನು ಕಾಣಬೇಕಾದ ದೃಷ್ಟಿಕೋನವನ್ನೂ ತೋರಿದ್ದಾರೆ.

'॥ ಮಾಡು ದಾನಧರ್ಮವ ಪರ ಉಪಕಾರವ ಮರೆಯದಿರೆಚ್ಚರಿಕೆ ॥
ಕೇಡು ನೆನೆಯ ಬೇಡ ನಂಬಿದವರ ಮೇಲೆ ಕೆಡುವೆ ನೀನೆಚ್ಚರಿಕೆ ॥
ಮೂಢರ ಒಡನಾಡಿ ಮುಂದೆ ಕೆಡಲು ಮೋಸ ನೋಡೆಚ್ಚರಿಕೆ ।
ನಾಡೊಳು ಸುಜನರ ನೋಡಿ ನಡೆ ಕಂಡ್ಯ ನಟನೆ ಬೇಡೆಚ್ಚರಿಕೆ ॥'5

'॥ ಏನು ಇಲ್ಲದ ಎರಡು ದಿನದ ಸಂಸಾರ । ಜ್ಞಾನದಲಿ ದಾನಧರ್ಮವ ಮಾಡಿರಯ್ಯ ॥

॥ ಹಸಿದು ಬಂದವರಿಗೆ ಅಶನವೀಯಲು ಬೇಕು । ಶಿಶುವಿಗೆ ಪಾಲ್ಬೆಣ್ಣೆ ಉಣಿಸಬೇಕು ।
ಹಸನಾದ ಭೂಮಿಯನು ಧಾರೆಯೆರೆಯಲು ಬೇಕು । ಹುಸಿಯಾಡದಲೆ ಭಾಷೆ ನಡೆಸಲೇ ಬೇಕು ॥

॥ ಕಳ್ಳತನ ಮಾಡಿ ಒಡಲ ಹೊರೆಯಲು ಬೇಡ । ಕುಳ್ಳಿರ್ದ ಸಭೆಯೊಳಗೆ ಕುತ್ಸಿತವು ಬೇಡ ।
ಒಳ್ಳೆಯವ ನಾನೆಂದು ಬಲು ಹೆಮ್ಮೆ ಪಡಬೇಡ । ಬಾಳ್ವೆ ಸ್ಥಿರವೆಂದು ನೀ ನಂಬಿ ಕೆಡಬೇಡ ॥

॥ ದೊರೆತನವು ಬಂದಾಗ ಕೆಟ್ಟುದ ನುಡಿಯಬೇಡ । ಸಿರಿ ಬಂದ ಕಾಲಕ್ಕೆ ಬಲು ಮೆರೆಯಬೇಡ ।
ಸಿರಿವಂತ ಶ್ರೀಕಾಗಿನೆಲೆಯಾದಿಕೇಶವನ । ಚರಣ ಕಮಲವ ಸೇರಿ ಸುಖಿಯಾಗು ಮನುಜ ॥6

– ಹೀಗೆ ಕನಕದಾಸರ "ಸಾಮಾಜಿಕಪ್ರಜ್ಞೆ"ಯ ಕುರಿತಾದ ಕೀರ್ತನೆಗಳಲ್ಲಿ ಅವರ ಸತ್ಯನಿಷ್ಠೆ, ಕರ್ತವ್ಯಪ್ರಜ್ಞೆ, ಲೋಕಕಾರುಣ್ಯ, ನೈತಿಕಶ್ರದ್ಧೆಗಳು ಕನಕದಾಸರ ಉಪದೇಶ, ಸಾಮಾಜಿಕ ನೀತಿಬೋಧೆಯ ಹಿಂದಿರುವ ಪ್ರೇರಕಶಕ್ತಿಗಳಾಗಿವೆ.

*** ** ***

**✣ ⁜ ✣ ಅಡಿಟಿಪ್ಪಣಿಗಳು ✣ ⁜ ✣**

೧. ಕೊ.ಟ್ಯಾ.ರಮೇಶ್, "ಕನಕದಾಸರ ಕಾಲದ ಸಾಮಾಜಿಕ, ರಾಜಕೀಯ, ಧಾರ್ಮಿಕ ಹಿನ್ನೆಲೆ", "ಕಸಾದ" ಸಂ–೧, ಪು.೮೬೮
೨. "ಕಸಾದ", ಪು.೧೦೫, ಪದ್ಯ–೧೧೪
೩. "ಕಸಾದ", ಪು.೧೬೫–೬೬, ಪದ್ಯ–೧೭೫
೪. "ಕಸಾದ", ಪು.೧೭೮, ಪದ್ಯ–೧೮೭
೫. "ಕಸಾದ", ಪು.೧೮೦, ಪದ್ಯ–೧೯೦
೬. "ಕಸಾದ", ಪು.೧೬೪, ಪದ್ಯ–೧೭೭

*** ** ***

## ೪. 'ಕ್ಷುದ್ರದೇವತೋಪಾಸನೆ', 'ಪ್ರಾಣಿಬಲಿ', 'ಮದ್ಯಪಾನ', 'ಬೆತ್ತಲೆಸೇವೆ'

ಸ್ವಾರ್ಥದಿಂದಾಗಿ ಶಾಸ್ತ್ರಾರ್ಥಗಳನ್ನು ಯಥಾರ್ಥವಾಗಿ ತಿಳಿಸದಿರುವುದು ಮತ್ತು ಶಾಸ್ತ್ರದಲ್ಲಿ ಹೇಳಿದ್ದನ್ನು ತಪ್ಪಾಗಿ ಅರ್ಥಮಾಡಿಕೊಳ್ಳುವುದ-ರಿಂದ ಮೂಢನಂಬಿಕೆಗಳು ಸೃಷ್ಟಿಯಾಗುತ್ತವೆ. ಪರಿಣಾಮವಾಗಿ, ಅಜ್ಞಾನ, ಅಂಧಶ್ರದ್ಧೆ ಹುಟ್ಟುತ್ತದೆ. ಇದರಿಂದಾಗಿ ಯಾವ ದೇವರನ್ನು ಆರಾಧಿಸಬೇಕು. ಯಾವ ಪೂಜೆಯನ್ನು ಮಾಡಬೇಕು. ಎಂಬ ನಂಬಿಕೆಯಲ್ಲಿ ಅನುಮಾನಗಳು ಹೊಗೆಯಾಡಲು ಆರಂಭಿಸಿದಾಗ ಕಂಡಕಂಡವರು ಹಣದ ಆಮಿಷಕ್ಕೊಳಗಾಗಿ ಉಪದೇಶಿಸಿದಂತೆ ಕಂಡ ಕಂಡ ದೇವರನ್ನು ಉಪಾಸಿಸಲು ತೊಡಗುತ್ತಾರೆ. ಹೀಗೆ ಬೆಳೆದಂತಹ ಮೌಢ್ಯದ ಕಳೆಯನ್ನು ಕಿತ್ತು ಮಾನವೀಯತೆಯನ್ನು ಬೆಳೆಸಲು ಶ್ರಮಿಸಿದ ಸಮಾಜಸುಧಾರಕರು ಭಾರತದಲ್ಲಿ ಅನೇಕ ಮಂದಿ. ಆದರೆ ಅಂತಹವರಲ್ಲಿ ವಿಡಂಬನಾತ್ಮಕವಾಗಿ ಜನರ ಮನಸ್ಸನ್ನು ಅತ್ಯಂತ ತಾಳ್ಮೆಯಿಂದಲೇ ಬದಲಿಸುವ ಸದುದ್ದೇಶವನ್ನು ಸಾಧಿಸಿದ ನಮ್ಮ ಕನ್ನಡ ನಾಡಿನ ಕನಕದಾಸರ ಸ್ಥಾನ ಅತ್ಯಂತ ವೈಶಿಷ್ಟ್ಯಪೂರ್ಣವಾಗಿದೆ.

'॥ತತ್ವದ ಅರ್ಥವ ವಿಚಿತ್ರದಿ ಪೇಳೆ । ಕತ್ತೆಯ ಚಿತ್ತಕೆ ಹತ್ತೀತೆ ।
ಮಾಯಾಜಾಲವ ಕಲಿತ ಮನುಷ್ಯಗೆ । ಕಾಯ ಕಷ್ಟವು ಬಿಟ್ಟೀತೆ ॥' ೧

'॥ದಾನಧರ್ಮವ ಮಾಡಿ ಸುಖಿಯಾಗು ಮನವೆ । ಹೀನವೃತ್ತಿಯಲಿ ನೀ ಕೆಡಬೇಡ ।
ಎಕ್ಕನಾತಿ ಎಲ್ಲಮ್ಮ ಮಾರಿ ದುರ್ಗಿ ಚೌಡಿಯ । ಅಕ್ಕರಿಂದಲಿ ಪೂಜೆ ಮಾಡಲೇಕೆ ॥
ಕೊಂಬು ಹೋತು ಕುರಿ ಕೋಣಗಳನ್ನು ಬಲಿಗೊಂಬ । ದೊಂಬಿ ದೈವಗಳ ಭಜಿಸದಿರು ॥ ೨

'॥ ಹರಿಹರರ ಪೂಜೆಗಳು ಹಗರಣಗಳಾದವು । ಉರಿ ಮಾರಿ ಚಾಮುಂಡಿ ಶಕ್ತಿಗಳಿಗೆ ॥
ಕುರಿ ಕೋಣ ನೈವೇದ್ಯ ಧೂಪಗಳಿಂದ । ಪರಮ ಭಕ್ತಿಯ ಸಲಿಸಿ ಪೂಜಿಸುವರಯ್ಯ ॥ ' ೩

– ಎನ್ನುವ ಇವೇ ಮೊದಲಾದ ಕೀರ್ತನೆಗಳಲ್ಲಿ ಮೌಢ್ಯಾಚರಣೆಗಳ ವಿರೋಧಿ ನಿಲುವು ಎದ್ದುಕಾಣಿಸುತ್ತದೆ. ಹಾಗೇಯೇ;

'॥ ಕ್ಷೀಣ ಶಾಸ್ತ್ರಾರ್ಥವನು ಪರಿಗ್ರಹಿಸಿ ನಿಖಿಲ ಕುರಿ । ಕೋಣಗಳ ತಲೆ ಚೆಂಡ ಕುಟ್ಟಿಸುತ ।
ಪ್ರಾಣಿ ಹತ್ಯೆಯ ಮಾಡುವುದ್ಯಾವ ಸತ್ಕರ್ಮ ॥ ' 4

'॥ ಖಂಡವನು ಕೊಯ್ದು ಕೊಡಬೇಡ ದಕ್ಷುರಿಯುಗ್ನಿ। ಕುಂಡವನು ಹೊಕ್ಕು

ಹೊರಡುವುದುಚಿತವೆ ॥

ಭಂಡರಂದರಿ ಬತ್ತಲೆಯು ಬರುವುದಾವಾಟ। ಗೋವಿಂದ ಎನ್ನಲರಿಯದೆ ವೃಥಾ।

ನೋವಿಂದ ಭಂಗವ ಪಡುವುದು ಉಚಿತವೆ ॥' [೫]

"ಪ್ರಾಣಿಬಲಿ"ಯಂತಹ ಅಮಾನುಷ ಪದ್ಧತಿಯನ್ನೂ, ಗ್ರಾಮದೇವತೆ ಜಾತ್ರೆಗಳಲ್ಲಿ ಬಾಯಿಗೆ ಬೀಗ ಚುಚ್ಚಿಸಿಕೊಂಡು ಸುಡುತ್ತಿರುವ ಕೆಂಡದ ಹೊಂಡವನ್ನು ಹಾಯುವಂತಹ ಮತ್ತು "ಬೆತ್ತಲೆಸೇವೆ"ಗಳಂತಹ ದುಷ್ಟ ಮತ್ತು ಅಮಾನವೀಯ ಪದ್ಧತಿಗಳನ್ನು ಕೈಬಿಡುವಂತೆ ಕನಕದಾಸರು ಮುಚ್ಚುಮರೆಯಿಲ್ಲದೆ ಸಮಾಜಕ್ಕೆ ನೇರವಾಗಿ ನೀತೋಪದೇಶ ಮಾಡಿದ್ದಾರೆ. ಮತ್ತು ದಿಟ್ಟತನದಿಂದ ವಿರೋಧಿಸಿ ಖಂಡಿಸಿದ್ದಾರೆ.

*** ** ***

## ✣ ⁂ ✣ ಅಡಿಟಿಪ್ಪಣಿಗಳು ✣ ⁂ ✣

೧. "ಕಸಾದ", ಪು.೧೬೯, ಪದ್ಯ-೧೮

೨. "ಕಸಾದ", ಪು.೧೭೧, ಪದ್ಯ-೧೮೨

೩. "ಕಸಾದ", ಪು.೧೬೬, ಪದ್ಯ-೧೭೫

೪. "ಕಸಾದ", ಪು.೧೯೧, ಪದ್ಯ-೧೦೩

೫. "ಕಸಾದ", ಪು.೧೯೧, ಪದ್ಯ-೨೦೩

*** ** ***

## ೫. 'ಅಪುತ್ರಸ್ಯ ಗತಿರ್ನಾಸ್ತಿ'- ಬಗ್ಗೆ ಸಜ್ಜನರಿಗೆ ಕನಕದಾಸರ 'ನೀತಿ ಸಂದೇಶ'.

---

ಸಮಾಜೋದ್ಧಾರಕ್ಕಾಗಿಯೇ ತಮ್ಮ ಇಡೀ ಜೀವನವನ್ನೇ ಮುಡಿಪಾಗಿಟ್ಟ ಕನಕದಾಸರು ಕೀರ್ತನೆಗಳನ್ನು ಹಾಡಿಕೊಂಡು ಊರೂರು ತಿರುಗುವಾಗ ಜಾತೀಯತೆಯಲ್ಲಿನ ಮೇಲು-ಕೀಳೆಂಬ ತಾರತಮ್ಯದಿಂದ ತಲೆ ಚಿಟ್ಟು ಹಿಡಿಸುವಂಥ ಬಾಧೆ ತಟ್ಟದೆ ಇಲ್ಲ. ಕಿಲುಬನ್ನು ಹೋಗಲಾಡಿಸಲು ಪಾತ್ರೆಯನ್ನು ಉಜ್ಜಿ ಚೆನ್ನಾಗಿ ಕೆರೆದು ತೆಗೆಯುವಂತೆ; ಮೇಲ್ವರ್ಗದವರ ಮಾತುಗಳನ್ನು ಉಪೇಕ್ಷಿಸುವ ಜನರನ್ನು ತಿದ್ದುವ ಸಲುವಾಗಿ ಕೇವಲ "ವಾಚ್ಯ"ವಾಗಿ ಮಾತ್ರವಲ್ಲ; "ಸೂಚ್ಯ", "ಕಟೋಕ್ತಿ", "ವಕ್ರೋಕ್ತಿ", "ವ್ಯಂಗ್ಯ", "ವಿಡಂಬನಾತ್ಮಕ"ವಾಗಿಯೂ ಸಮಾಜಕ್ಕೆ ನೀತಿಬೋಧೆ ಮಾಡಿದ್ದಾರೆ.

*'ಮಂಡೆಬೋಳು ಮಾಡಿ ನಾಮದುಂಡೆಯನ್ನು ಬರೆದು ಕೆಡಿಸಿ । ಕಂಡ ಕಂಡವರನು*
*ಕೂಡಿ ಭಂಡ ಜನ್ಮ ಹೊರೆಯುವವನಿಗೆ ॥*

*ಅವರವರ ಕೈಯ ನೋಡಿ ಹಲವು ಕೆಲವು ಮಾತನಾಡಿ ಹಲವ ಹಂಬಲಿಸಿ । ದಿನವ ಕಳೆದು ಉಳಿದು ಬಾಳುವಗೆ । ದಾಸಪಟ್ಟವೊ ಸನ್ಯಾಸ ಪಟ್ಟವೋ ॥* [೧] – ಎನ್ನುವ ಮೂಲಕ ಕನಕದಾಸರು ಅಂದಿನ ಕಾಲದ ಸಮಾಜದಲ್ಲಿದ್ದ ಕೆಲವು ಬೂಟಾಟಿಕೆ ಸನ್ಯಾಸಿಗಳು, ದಾಸರನ್ನು ತರಾಟೆಗೆ ತೆಗೆದುಕೊಂಡಿರುವ ಪರಿಯು ಹೀಗಿದ್ದು ಇದು, ಸಾರ್ವತ್ರಿಕ ಕಾಲಕ್ಕೂ ಅನ್ವಯಿಸುವಂತಹದ್ದೇ ಆಗಿದೆ. ಅಂತೆಯೇ, ಈ ನಡುವೆ ಸಮಕಾಲೀನ ಸಮಾಜದಲ್ಲಿದ್ದಂತಹ ಮತ್ತೊಂದು ಸಮಸ್ಯೆಯನ್ನು ಅವರು ಕಂಡಿದ್ದು ಎಂದರೆ, "ಅಪುತ್ರಸ್ಯ ಗತಿರ್ನಾಸ್ತಿ" ಎನ್ನುವಂತಹದ್ದು. ಅಂದರೆ, "ಗಂಡು ಮಕ್ಕಳಿಲ್ಲದ ಮಾತಾ-ಪಿತೃಗಳಿಗೆ ಪರಗತಿಯಿಲ್ಲ".-ಎಂಬ ಈ ಭಾವನೆ ನಮ್ಮ ಹಿಂದೂ ಸಂಪ್ರದಾಯದಲ್ಲಿ ಬಹಳ ಪ್ರಾಚೀನ ಕಾಲದಿಂದಲೂ ಬೆಳೆದು ಚಾಲ್ತಿಯಲ್ಲಿದೆ. ಈಗಲೂ ಕೆಲವು ಮನೆತನದವರಲ್ಲಿ ಈ ಸಮಸ್ಯೆ ಉದ್ಭವಿಸುವುದು ಸಹಜ ಎಂದರೆ, ಬಹುಶಃ ತಪ್ಪಾಗಲಾರದೇನೋ ! "ಗಂಡು ಮಕ್ಕಳನ್ನು ಹಡೆಯದ ತಂದೆ-ತಾಯಿಗಳಿಗೆ ಹಾಗೂ ಅವರ ಹಿರಿಯರಿಗೆ ಸದ್ಗತಿ ಪ್ರಾಪ್ತಿಯಿಲ್ಲ". -ಎನ್ನುವ ಪ್ರತೀತಿಗೆ ಕನಕದಾಸರು ಬಹಳ ಕಠೋರವಾಗಿಯೇ ಪ್ರತಿಕ್ರಿಯೆ ನೀಡಿರುವುದನ್ನು ನಾವು ಒಂದು ಕೀರ್ತನೆಯ ಮೂಲಕ ತಿಳಿದುಕೊಳ್ಳಬಹುದಾಗಿದೆ.

*'॥ ಮಗನಿಂದೆ ಗತಿಯುಂಟೆ ಜಗದೊಳಗೆ । ನಿಗಮಾರ್ಥ ತತ್ತ್ವ ವಿಚಾರದಿಂದಲ್ಲದೆ ?! ।*
*ಪರಮ ದುಷ್ಟನಾಗಿ ಮರೆತು ಸ್ವಧರ್ಮವ । ಗುರು ಹಿರಿಯರ ಸಾಧುಗಳ ನಿಂದಿಸಿ ॥*

ಬೆರೆದನ್ಯಜಾತಿಯ ಪರನಾರಿಯರ ಕೂಡಿ । ಸುರೆ ಕುಡಿದು ಜೂಜಾಡಿ ನರಕಕೆ ಬೀಳುವ ।
ಗಂಡು ಮಕ್ಕಳಿದ್ದರೇನು ? ಇಲ್ಲದಿದ್ದರೇನು ?!

॥ ಲಲನೆಯರು ಪುರುಷರು ತಂತಮ್ಮ ಕಾಮದ । ನಿಲುವಾಗಿ ಕೂಡೆ ಶೋಣಿತ ಶುಕ್ಲದಿ ।
ಮಿಳಿತವಾದ ಪಿಂಡ ತನ್ನ ಪೂರ್ವಕರ್ಮದಿಂದ ।ನೆಲಕೆ ಬೀಳಲು ಸಲಹಿ ರಕ್ಷಿಪುದೆ ॥

॥ ಸುರಿಲ್ಲದವಗೆ ಸದ್ಗತಿ ಇಲ್ಲವೆಂತೆಂಬ । ಕೃತಕ ಶಾಸ್ತ್ರವು ಲೌಕಿಕಭಾವಕೆ ।
ಕ್ಷಿತಿಯೊಳಗೆ ಕಾಗಿನೆಲೆಯಾದಿಕೇಶವ ಜಗತ್ಪತಿಯ ಭಜಿಪಗೆ ಸದ್ಗತಿಯಿರದೆ ಹೋಹುದೆ ? ॥'[೨]

– "ಸತ್ಯ, ಶಾಂತ, ದುರ್ವೃತ್ತಿ ನಿಗ್ರಹ, ಸಮಚಿತ್ತ"ರೆಂಬ ಈ ನಾಲ್ಕು ಮಂದಿ ಉತ್ತಮ ಮಕ್ಕಳು ನಮ್ಮೊಳಗೆ ಇದ್ದ ಮೇಲೆ; ತ್ರಿಗುಣಸಹಿತ ಪರಮಾತ್ಮನ ಧ್ಯಾನ ಹಗಲಿರುಳೂ ಮಾಡುತ್ತಾ ಪ್ರಪಂಚವಾಸನೆಯ ಬಿಟ್ಟು, ನಿತ್ಯಾನಂದದಿಂದ ಇರುವವರಿಗೆ ಮಗನಿದ್ದರೇನು ? ಇಲ್ಲದಿದ್ದರೇನು ? !" – ಎಂದು ಸಾಂತ್ವನ ಹೇಳಿದ್ದಾರೆ. ಇಲ್ಲಿ "ಸಾಮಾಜಿಕತೆ"ಯೊಂದಿಗೆ ಕನಕದಾಸರ "ವೈಚಾರಿಕಪ್ರಜ್ಞೆ"ಯೂ ಸೇರಿ ಹಾಲಿನೊಂದಿಗೆ ಜೇನು ಬೆರೆಸಿದಂತಹ ಸವಿಯಾದ ಮೃದು ಮಧುರ ನುಡಿಗಳೊಂದಿಗೆ ನೀಡಿರುವ ಸಂದೇಶ, ನೀತಿಬೋಧೆಯು ಅಸಾಯಕತನದಿಂದ ಬಳಲಿ ನೊಂದು,ಬೇಯುತ್ತಿರುವವರಿಗೆ ಅಮೃತ ದೊರೆತಂತಾಗಿದೆ. ಕೇವಲ "ಸಾಮಾಜಿಕಪ್ರಜ್ಞೆ"ಯಷ್ಟೇ ಅಲ್ಲ; ಅದರೊಂದಿಗೆ ಬೆರೆತಿರುವ "ವೈಚಾರಿಕಪ್ರಜ್ಞೆ"ಗೆ ಈ ಕೀರ್ತನೆಯೊಂದು ಉತ್ತಮ ಉದಾಹರಣೆಯಾಗಿದೆ.

*** ** ***

## ✣ ✲ ✣ ಅಡಿಟಿಪ್ಪಣಿಗಳು ✣ ✲ ✣

೧. "ಕಸಾದ", ಪು.೧೯೩, ಪದ್ಯ-೨೦೫

೨. "ಕಸಾದ", ಪು.೧೯೭, ಪದ್ಯ-೨೦೮

*** ** ***

## ಅಧ್ಯಾಯ – ೪. : **ಧಾರ್ಮಿಕ ಪರಿಸರ ಮತ್ತು ಹಿನ್ನೆಲೆ**

"ಧರ್ಮ" ಎಂಬ ಶಬ್ದವು ಇಂಗ್ಲಿಷ್‌ನ "ರಿಲಿಜಿಯನ್" ಪದದ ಸಂವಾದಿಯೇ ಆದರೂ; ಅದಕ್ಕಿಂತಲೂ ಬಹಳ ಹೆಚ್ಚು ವ್ಯಾಪಕವಾದುದು. "ಧರ್ಮ"ದ ಎದುರಿಗೆ "ಮತ" ಶಬ್ದವೂ ಕೂಡಾ ಸಂಕುಚಿತವಾದುದು ಮತ್ತು ಧರ್ಮದ ಒಂದು ಅಂಗ "ಮತ" "ಧೃ" ಧಾತುವಿನಿಂದ ನಿಷ್ಪನ್ನವಾದ ಧರ್ಮವು ಸೃಷ್ಟಿಯ ಅಸ್ತಿತ್ವಕ್ಕೆ ಆಧಾರಭೂತವಾದುದು. ಚೇತನವನ್ನು ಊರ್ಧ್ವಮುಖವಾಗಿಸುವ ಆಂತರಿಕ ಪ್ರೇರಣೆಯೇ ಧರ್ಮ. ಇದನ್ನು "ಪರಿಪೂರ್ಣತೆಯ ಅಭೀಪ್ಸೆ, ಬಿಡುಗಡೆಯ ಹಂಬಲ" ಎನ್ನಬಹುದು. ಬಹುಶಃ ಬೌದ್ಧ ಧರ್ಮವೊಂದನ್ನು ಹೊರತುಪಡಿಸಿ ಉಳಿದೆಲ್ಲಾ "ಧರ್ಮ"ದ ಕೇಂದ್ರಬಿಂದುವೇ "ದೇವರು". ದೇವರಿಲ್ಲದೆ ಧರ್ಮವಿಲ್ಲ. ಆದ್ದರಿಂದ "ಧರ್ಮ" ಅಥವಾ ಧಾರ್ಮಿಕತೆ ಎಂದರೇನು ? ಅಂದರೆ, "ಮನುಷ್ಯನಲ್ಲಿರುವ ಶುದ್ಧವಾದ, ಪವಿತ್ರವಾದ ಭಾವನೆಯೇ ಧರ್ಮ". ಇಂತಹ "ಧರ್ಮ"ವು ವೈಯಕ್ತಿಕವಾದುದೇ ? ಅಥವಾ ಸಾಮೂಹಿಕವಾದುದೇ ? ಎಂದರೆ, ಆಧ್ಯಾತ್ಮ-ಧರ್ಮ; ಇವೆಲ್ಲವೂ ಮನುಷ್ಯನ ವೈಯಕ್ತಿಕವಾದುದೇ. ಏಕೆಂದರೆ, "ಮನುಷ್ಯ ಏಕಾಂತದಲ್ಲಿ ಕುಳಿತು ತಾನು ಏನನ್ನು ಕುರಿತು ಚಿಂತಿಸುತ್ತಾನೋ ಅದೇ ಧರ್ಮ".- ಈ ಹಿನ್ನೆಲೆಯಲ್ಲಿ ನೋಡಿದಾಗ, ಕನಕದಾಸರೊಬ್ಬರು ಮಹಾನ್ ಧಾರ್ಮಿಕ ವಿಭೂತಿ ಪುರುಷರು. ಯಾವ ಮತದವರೂ ಅಲ್ಲ; ಯಾವ ಮಠದವರೂ ಅಲ್ಲ. ಅವರಲ್ಲಿ ನಾವು ಒಬ್ಬ ಮಹಾನ್ ಭಕ್ತ, ಅನುಭಾವಿ, ಆಧ್ಯಾತ್ಮಿಕ ಚೇತನವನ್ನು ಕಾಣುತ್ತೇವೆ.[೧] ಜನಸಾಮಾನ್ಯರಿಗೆ ಧರ್ಮದ ರಹಸ್ಯವನ್ನು ಸರಳವಾಗಿ ತಿಳಿಸಿಕೊಟ್ಟವರು. ಇವರದು ಸಮನ್ವಯಶೀಲ ವ್ಯಕ್ತಿತ್ವ. ಅವರಲ್ಲಿ ನಾವು ಸ್ವತತಂತ್ರ ನಿರಂಕುಶಮತಿ, ವೈಚಾರಿಕ ಮನೋಭಾವ, ವಿಮರ್ಶನಬುದ್ಧಿಯನ್ನು ಉಳಿದ ಯಾವುದೇ ಹರಿದಾಸರುಗಳಿಗಿಂತಲೂ ಮಿಗಿಲಾಗಿ ಗೋಚರಿಸುವುದನ್ನು ಗುರ್ತಿಸುತ್ತೇವೆ. ಆರ್ತಭಾವುಕತನ, ಜಿಜ್ಞಾಸುಪ್ರವೃತ್ತಿಗಳೊಂದಿಗೆ ಭಕ್ತಿಮಾರ್ಗ-ಜ್ಞಾನಮಾರ್ಗಗಳ ಮಿಲನವು ಇವರ ವ್ಯಕ್ತಿತ್ವದಲ್ಲಿದೆ.

ಕನಕದಾಸರ ಸಮಕಾಲೀನ ಸಮಾಜದಲ್ಲಿದ್ದ ಕುಂದು-ಕೊರತೆಗಳೇ ಇವರ ಕೀರ್ತನೆಗಳಿಗೆ "ವಸ್ತು" ಅಥವಾ "ವಿಷಯ"ವನ್ನು ಒದಗಿಸಿಕೊಟ್ಟಿದೆ. ಭಕ್ತನಾದವದ ಆರ್ತ ಭಕ್ತಿಯನ್ನು, ಅಧಃಪತನವಾಗುತ್ತಿರುವ ಸಮಾಜವನ್ನು ಕಂಡು ಕಳಕಳಿಸುವ ಭಕ್ತ, ಸಮಾಜಸುಧಾರಕರ ಮನೋಧರ್ಮವನ್ನು ಇವರ ಕೀರ್ತನೆಗಳಲ್ಲಿ ಕಾಣಬಹುದಾಗಿದೆ.[೨] ಅವರ

ಕೀರ್ತನೆಗಳಲ್ಲಿ ನಾವು ಪ್ರಮುಖವಾಗಿ ಮೂರು ಅಂಶಗಳನ್ನು ಗಮನಿಸುತ್ತೇವೆ. ೧. ಕೃಷ್ಣಭಕ್ತಿ, ೨. ಇತರ ಧರ್ಮಗಳ ಬಗ್ಗೆ ಅವರ ಅಭಿಪ್ರಾಯ, ೩. ಸಮಾಜದ ಬಗ್ಗೆ ಅವರ ಪ್ರತಿಕ್ರಿಯೆ.[೩]

"ಭಕ್ತಿ ಚಳವಳಿ"ಯ ಅಂದಿನ ಸಂದರ್ಭದಲ್ಲಿ "ಸಾಮಾಜಿಕ ಆಂದೋಲನ"ಕ್ಕೆ ನಿಲ್ಲುವ ಹೋರಾಟ ಪ್ರವೃತ್ತಿಯೂ ಕನಕದಾಸರಿಗಿರಲಿಲ್ಲ.[೪] ನಿಜ. ಹಾಗೆಂದೇ, ಅವರು ವೈರಾಗ್ಯ ತಳೆದಾಗ "ಮತವೆ ಒಳ್ಳೆಯದು ಭಾಗವತವು । ನಮ್ಮ ಯತಿ ರಾಮಾನುಜ ।"" – ಎಂಬ "ಬೇರೆ ಮನಸಿನ ಮತವೆ ಒಳ್ಳೆಯದು" – ಎಂದು ಕೀರ್ತನೆಯಲ್ಲಿ ಹೇಳಿರುವಂತೆ ರಾಮಾನುಜರ ಭಾಗವತ ಮತವೆ ಒಳ್ಳೆಯದೆಂದು ನಂಬಿರುತ್ತಾರೆ. ಇದನ್ನು "ಮೋಹನ ತರಂಗಿಣಿ" ಕಾವ್ಯದ "ತಾಮಸ ಗುಣನಾಶ ಸಾತ್ವಕೋಲ್ಲಾಸ ಶ್ರೀರಾಮಾನುಜಮುನಿ ಶರಣು " (೧-೨) ಕೂಡಾ ಸಮರ್ಥಿಸುತ್ತದೆ. ಕನಕದಾಸರು ಅಧಿಕಾರ- ಐಸಿರಿಗಳ ಮಧ್ಯದಲ್ಲಿಯೇ ಪ್ರಾಪಂಚಿಕ ಪೆಟ್ಟುಗಳನ್ನು ತಿಂದು ದೈವಿಕತೆಯ ಆಹ್ವಾನವನ್ನು ಸ್ವೀಕರಿಸಿ ಹರಿದಾಸರಾದ ಕೆಳಜಾತಿಯವರು.[೫]

ಕನಕದಾಸರು ಒಮ್ಮೆ ತನ್ನ ಮಾವನ ಮನೆಯಲ್ಲಿ ಅಳಿಯನಾಗಿ ದೀರ್ಘಕಾಲ ಉಳಿದುಕೊಳ್ಳಬೇಕಾದ ಸಂದರ್ಭವೊಂದು ಒದಗಿಬಂದಾಗ; ಅಲ್ಲಿ ಅವರಿಗಾದ ಕಹಿ ಅನುಭವವನ್ನು, "ಭಾಮೆಯಳ ತಂದೆ ಮನೆಯಲ್ಲಿ ಜೀವಿಸುವುದಕ್ಕಿಂತ ಸಾಯುವುದೇ ಲೇಸು."- ಎಂಬ ಕೀರ್ತನೆ ರಚಿಸಿದ್ದಾರೆ. ಹಾಗೆಯೇ, "ಬಂದದ್ದು ಬಚ್ಚಲಗುಣಿ ತಿಂದದ್ದು", "ಮೊಲೆ ಮಾಂಸ- ಇಂಥ ಅಂಧಕನಿಗೆ ನನಗಿನ್ಯಾತರ ಕುಲವಯ್ಯಾ", "ರಣದೊಳಗೆ ಅಂಗಾಂಗ ಖಂಡ- ತುಂಡಾಗಿ ಪ್ರತಿ ರಣವನುತ್ತರಿಸಿ ಮರಣವ ತಾಳಿರೆ", "ಜಗದೊಳಗೆ ತಾನು ತಂದೆಯ ಮಾತನು ಕೇಳದಾ ಮಗನು "ಪರ"ಕೆ ಸಲ್ಲುವ ಪ್ರಾಜ್ಞನೇ?- ಮಂತಾದ ನೀತಿಬೋಧೆಯ ಕೀರ್ತನೆಗಳನ್ನು ರಚಿಸುವ ಸಂದರ್ಭ ಒದಗಿ ಸಾಮಾಜಿಕ ಆಂದೋಲನಕ್ಕಿಳಿಯುವುದು ಅನಿವಾರ್ಯವಾಗುತ್ತದೆ.

ವೈಷ್ಣವ ಧರ್ಮ ದಾಸ ಸಂಪ್ರದಾಯದ ಆರಂಭಕ್ಕೆ ಮೊದಲಿಟ್ಟಿತು. ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸುವುದರ ಮೂಲಕ ಧರ್ಮ ಪ್ರಚಾರಕಾರ್ಯ ಹಾಗೂ ತನ್ನ ಭಕ್ತಿಭಾವಕ್ಕೆ ಅಭಿವ್ಯಕ್ತಿಯನ್ನು ನೀಡಲು ಆರಂಭಿಸಿತು.[೬]

ಇತರ ಧರ್ಮಗಳ, ನಂಬಿಕೆಗಳ ಆಚರಣೆಗಳನ್ನು ವೈಷ್ಣವ ಧರ್ಮದ ಮೂಲಕ ನೋಡಿದ ಕನಕದಾಸರು ವಿಮರ್ಶಿಸಿದ್ದಾರೆ. ಈ ತೆರನ ವಿಚಾರಮಂಥನಗಳ ಅಧ್ಯಯನ ಆ ಕಾಲದ ಸಾಮಾಜಿಕ ಚಿಂತನೆಯ ಇತಿಹಾಸವನ್ನು ಬರೆಯುವಲ್ಲಿ ನೆರವಾಗುತ್ತದೆ.[೭]

'॥ ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೆ ಜನ್ಮ ಸಾರ್ಥಕವಿಲ್ಲದವರೆಲ್ಲ ಭಾಗವತರೆ ।
ಪಟ್ಟೆನಾಮವ ಬಳಿದು ಪಾತ್ರೆ ಕೈಯಲಿ ಹಿಡಿದು । ಗುಟ್ಟಿನಲಿ ಜಪಿಸುವ ಗುರುತರಿಯದೆ । ಕೆಟ್ಟಕೂಗನು
ಕೂಗಿ ಹೊಟ್ಟೆನು ಹೊರೆವಂಥ ।
ಹೊಟ್ಟೆಗುಡುವಗಳೆಲ್ಲ ಪರಮ ವೈಷ್ಣವರೆ ? । ಅಂಗಾಂಗದೊಳಗಿರುವ ಚಿನ್ಮಯನ ತಿಳಿಯದೆ ।
ಅಂಗಲಿಂಗದ ನೆಲೆಯ ಗುರುತರಿಯದೆ ।
ಜಂಗಮಸ್ಥಾವರದ ಹೊಲಬನರಿಯದ ಇಂಥ । ಭಂಗಿಮುಕ್ಕಗಳೆಲ್ಲ ನಿಜಲಿಂಗವಂತರೆ ?। ಅಲ್ಲಾ ಖುದಾ
ಎಂಬ ಅರ್ಥವನು ತಿಳಿಯದೆ । ಮುಲ್ಲಶಾಸ್ತ್ರದ ನೆಲೆಲಯ ಮುನ್ನರಿಯದೆ ॥
ಹೊಳ್ಳು ಕೂಗನು ಕೂಗಿ ಬಗುಳಿ ಬಾಯಾರುವಂಥ । ಕಳ್ಳಸುಳ್ಳರಿಗೆಲ್ಲ ವೀರಸ್ವರ್ಗವುಂಟೆ ?॥

ವೇಷ ಭಾಷೆಯ ಕಲಿತು ಗೋಸಾಯಿ ಉಡೆದೊಟ್ಟು । ಆಸೆಯನು ತೊರೆಯದೆಯೆ ತಪದೆ ಕುಳಿತು
।ವಾಸನೆಯ ಗುರ್ತಿನಾ ಹೊಲಬನರಿಯದ ಇಂಥ । ವೇಷಧಾರಿಗಳೆಲ್ಲ ಸಿನ್ಯಾಸಿಗಳೆ
ಆರುಚಕ್ರದ ನೆಲೆಯ ಅಷ್ಟಾಂಗ ಯೋಗದಲಿ । ಮೂರು ಮೂರ್ತಿಯ ಮೂರು ಕಡೆಯೊಳಿರಿಸಿ ।
ಮಾರಪಿತನಹ ಕಾಗಿನೆಲೆಯಾದಿಕೇಶವನ । ಸಾರಿ ಭಜಿಸಿದವರಿಗೆ ಕೊರೆವ ಕೊರತೆಯುಂಟೆ ? ॥'

– ಈ ಕೀರ್ತನೆಯು ಕನಕದಾಸರು "ಧರ್ಮ ಇರುವುದು ಮಾನವೀಯತೆಯಲ್ಲೇ ಹೊರತು ಜಾತಿ–ಮತಗಳ ಲಾಂಛನದಲ್ಲಿ ಅಲ್ಲ." – ಎಂಬ ನೀತಿಸಂದೇಶವನ್ನು ಜಗತ್ತಿಗೆ ಸಾರುತ್ತದೆ.

ಮೊದಲು ಶೈವ ಮತದ ಆಚರಣೆ ಅನುಸರಿಸುತ್ತಿದ್ದು, ನಂತರ ಶ್ರೀವೈಷ್ಣವ ಮತದಲ್ಲಿನ ಆಚಾರ–ವಿಚಾರಗಳಿಂದ ಬೇಸತ್ತರು. ಒಟ್ಟಾರೆ, ಯಾವ ಜಾತಿಮತದವರೂ ಪ್ರಾಮಾಣಿಕರಲ್ಲ. – ಎಲ್ಲರ ಉದ್ದೇಶವೂ "ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ" – ಎನ್ನುವುದನ್ನು ಕಂಡುಕೊಂಡರು. ನಂತರ ಅವರಿಗೆ ಯಾವ ಜಾತಿಯ ಗೊಡವೆಯೂ ಬೇಡವಾಯಿತು. ಆದರೆ, ಮಧ್ವಮತದ ವ್ಯಾಸರಾಜರಲ್ಲಿ ಅಪಾರವಾದ ಗುರುಭಕ್ತಿ ಹೊಂದಿದ್ದರು. ಆ ಮಠ ಮತ್ತು ಆ ಮಠದ ಶಿಷ್ಯರಲ್ಲೂ ಹಲವಾರು ನ್ಯೂನ್ಯತೆಗಳನ್ನು ಕಂಡರೂ ಅದನ್ನು ನೇರವಾಗಿ ಖಂಡಿಸದೆ; "ಮುಂಡಿಗೆ"ಗಳ ಮೂಲಕ ತಮ್ಮ ಸವಾಲೆಸೆದರು.

ಇಂಥ ಆಧ್ಯಾತ್ಮಿಕ ದೃಷ್ಟಿಕೋನದ ಒಂದು ಮುಖದಲ್ಲೇ ಜೀವನವನ್ನು ಅರ್ಥೈಸುವ, ಹುಡುಕುವ, ಶೋಧಿಸುವ ಕನಕದಾಸರ ಜೀವನದೃಷ್ಟಿ ಮೂಲಗಾಮಿಯಾಗಿ ನೋಡಿದರೆ ಭದ್ರಬುನಾದಿ ಇಲ್ಲದ್ದು. "ಈ ವಿಷಯದಲ್ಲಿ ನೀವು ಕನಕದಾಸರನ್ನು ಹಳಿದು ಅರ್ಥವಿಲ್ಲ." ಮತ್ತು "ಆ ಕಾಲದ ಆಧ್ಯಾತ್ಮಿಕ ಸೆಳೆತ ಎಷ್ಟು ಗಾಢವಾಗಿತ್ತು" ಎಂಬುದಕ್ಕೆ ಮಾತ್ರ ಉದಾಹರಣೆಯಾಗುತ್ತದೆ.[೮]

ಕನಕದಾಸರು ಯುದ್ಧಭೂಮಿಯಲ್ಲಿ ಸತ್ತು ಬದುಕಿದ ಮೇಲೆ ದಾಸರಾದರು. ಮೊದಲು ಶ್ರೀವೈಷ್ಣವ ದೀಕ್ಷೆ ಸ್ವೀಕರಿಸಿದರೂ ಅಲ್ಲಿನ ಡಂಬಾಚಾರಗಳಿಗೆ ಬೇಸತ್ತು ವ್ಯಾಸರಾಜರ ಬಳಿ ದಾಸತ್ವ ಸ್ವೀಕಾರಕ್ಕೆ ಅಣಿಯಾದಾಗ ಅದು ಅಧಿಕೃತವಾಗಿ ಫಲಿಸದೇ ಇದ್ದಾಗ ತಾವೇ ಸ್ವತಃ ಆದಿಕೇಶವನ ಅಂಕಿತ ಹೊಂದಿದರು. ಕೀರ್ತನೆಗಳನ್ನು ರಚಿಸಲು ಮುಂದಾದರು. ಅವರಿಗೆ ತಮ್ಮ ಮುಂದಿರುವ ಸಮಸ್ಯೆಗಳನ್ನು ಸುಲಭವಾಗಿ ಬಿಡಿಸಲು ಆಗಿನ ಸಂದರ್ಭದಲ್ಲಿ ಅವರಿಗಿದ್ದ ಒಂದೇ ಮಾರ್ಗ ದಾಸದೀಕ್ಷೆ. ತಾನು ಹರಿದಾಸನಾದರೆ, ಸಮಾಜದ ಎಲ್ಲಾ ವರ್ಗದ ಜನರನ್ನೂ ಆಧ್ಯಾತ್ಮಿಕ ಸೆಳೆತಕ್ಕೆ ಒಳಪಡಿಸಬಹುದು. ಜೀವನದಲ್ಲಿ ಮುಕ್ತಿಯನ್ನು ಕಾಣಲು "ಭಕ್ತಿಮಾರ್ಗ" ಹಿಡಿಯಲೇಬೇಕೆಂದು "ಭಕ್ತಿಪ್ರಜ್ಞೆ"ಗೆ ಒಳಗಾದರು.

ಕನಕದಾಸರು ದಾಸರೆಂದರೂ, ಭಗವಂತನ್ನು ಆರಾಧಿಸುವ ಸಮರ್ಪಣಭಾವದ ಕೇವಲ ಒಬ್ಬ ಪ್ರಾಂಜಲ ಭಕ್ತರೇ ಹೊರತು ದ್ವೈತ ಸಂಸ್ಕೃತಿಯ – ಇಲ್ಲವೇ ವಿಶಿಷ್ಟಾದ್ವೈತಗಳ ಉಪಾಧಿಯ ಕೈಗೆ ಸಿಕ್ಕಿದವರಲ್ಲ.[೯]

ವಾಸ್ತವವಾಗಿ, ಕನಕದಾಸರು ಎಲ್ಲಾ ಸಂಪ್ರದಾಯಗಳ ಸಾರವನ್ನೂ ಅಂದರೆ, ಭಕ್ತಿಪ್ರಕ್ರಿಯೆಗಳನ್ನೂ ಹೀರಿಕೊಂಡು, ಅವುಗಳನ್ನು ಮೀರಿ "ಅತ್ಯತಿಷ್ಠದ್ದಶಾಂಗುಲಂ" ಎನ್ನುವಂತೆ ಬೆಳೆದ ಅನುಭಾವಿ ಚೇತನ. ಈ ಔದಾರ್ಯವೇ ಅನುಭಾವಿಯ ಲಕ್ಷಣ. ಇಂತಹ ಅನುಭಾವಿಗೆ ಯಾವ ಮತವೂ ಇಲ್ಲ. ಕುಲವೂ ಇಲ್ಲ. ಪಂಥವನ್ನು ಮೀರಿದ

ಪ್ರಾಜ್ಞರು, ಮತವನ್ನು ಮೀರಿದ ಮಹಾಂತರು. ತನುಭಾವ ಅಳಿದ ಮೇಲೆ ಅನುಭಾವಿಯಾಗುತ್ತಾರೆ. –ಇದೇ "ಪರಾಸತ್ಯದ ಅಪರೋಕ್ಷಾನುಭೂತಿ." ವಿದ್ವಾಂಸರೊಬ್ಬರು "ಅನುಭಾವ" ಎಂದರೇನು ? ಎನ್ನುವುದಕ್ಕೆ "Love of God" ಎಂದು ಲಕ್ಷಣೀಕರಿಸಿದ್ದಾರೆ. ಅನುಭಾವಿ ಹೇಳುವುದೆಲ್ಲಾ ಅನುಭವ ಮೂಲವಾದದ್ದು. ಕನಕದಾಸರಲ್ಲಿ ನಾವು ತಾತ್ವಿಕ ವಿಚಾರಗಳನ್ನು ಕಾಣುತ್ತೇವೆ. ಅವೆಲ್ಲಾ ಕೇವಲ ಬೌದ್ಧಿಕ ಅರಿವಿನಿಂದ ಅಥವಾ ಶುಷ್ಕ ತರ್ಕದಿಂದ ಬಂದದ್ದಲ್ಲ. ಸಹಜಕವಿಯಿಂದ ವಿಸ್ಮಯವಾಗಿ ಮೂಡುವ ಅಭಿವ್ಯಕ್ತಿಯನ್ನೇ ಕಾಣುತ್ತೇವೆ.

*'ನೀ ಮಾಯೆಯೊಳಗೊ ನಿನ್ನೊಳು ಮಾಯೆಯೊ । ನಿನ್ನೊಳಗೆ ದೇಹವೊ । ದೇಹದೊಳಗೆ ನೀನೊ ॥ ಆಲಯವು ಬಯಲೊಳಗೊ ಬಯಲೊಳಗೆ ಆಲಯವೋ ॥* – ಈ ಕೀರ್ತನೆಯು ಭಗವಂತನ ಸರ್ವಾಂತರ್ಯಾಮಿತ್ತ್ವವನ್ನು ವೇದಾಂತ ತತ್ತ್ವದ ವೈಶಿಷ್ಟ್ಯತೆಯನ್ನು ಸರಸಪೂರ್ಣ ನಿರೂಪಣೆ ಮಾಡಿದ್ದಾರೆ.

–ಹೀಗೆ ಅವರ ಪ್ರತಿಯೊಂದು ಕೃತಿಯಲ್ಲೂ ಪ್ರಾಶಸ್ತ್ಯಪೂರ್ಣವಾದ ಚಮತ್ಕಾರ, ಪಾಂಡಿತ್ಯಪೂರ್ಣ ನಿರೂಪಣೆಗಳೊಂದಿಗೆ ಅನುಭಾವದ ಸಾಂಕೇತಿಕ ಆವಿಷ್ಕಾರಗಳನ್ನು ಕಾಣುತ್ತೇವೆ.[೧೦]

ಅಂತೆಯೇ, ಡಾ. ಸಿ.ಪಿ.ಕೃಷ್ಣಕುಮಾರ್ ಅಭಿಪ್ರಾಯಪಡುವಂತೆ, "ಪ್ರತಿಯೊಬ್ಬ ಸಾಧಕನ ಬದುಕಿನಲ್ಲೂ ಆತ್ಮದ ಕರಾಳರಾತ್ರಿ (Dark of the Sole) ಎನ್ನುವುದೊಂದು ಅವಸ್ಥೆಯಿರುತ್ತದೆ. ಕನಕದಾಸರೂ ಕೂಡಾ ಅಂತಹದ್ದೊಂದಕ್ಕೆ ಹೊರತಲ್ಲ. ಸಂಸಾರಬದ್ಧ ಮಾಯಾಮೋಹಪರವಶರಾಗುವುದರಿಂದ ಬಿಡಿಸಿಕೊಳ್ಳಲು ಭಗವತ್ಕರುಣೆಗಾಗಿ,

*'ನೀನೇ ದಯಮಾಡಿ ಸಲಹೊ ಎನ್ನನು ಕೃಷ್ಣ । ಕಾನನದೊಳು ಕಣ್ಣುಮುಚ್ಚಿ ಬಿಟ್ಟಿಹರೊ । ಘೋರ ಸಂಸಾರವೆಂಬ ವಾರಿಧಿಯೊಳಗೆ ಬಿದ್ದು । ಪಾರಗಾಣದಾದೆನಲ್ಲಯ್ಯ ॥'*– ಎಂದು ಭಗವಂತನನ್ನು ಯಾಚಿಸುತ್ತಾರೆ. ಹಾಗೆಯೇ, *'॥ಡಿಂಬದೊಳಗಿರುವ ಜೀವ ಕಂಬಸೂತ್ರ ಬೊಂಬೆಯಂತೆ ಎಂದಿಗಾದರೊಂದು ದಿನ ಸಾವು ತಪ್ಪದೊ ॥'*– ಎಂಬ ಜಗತ್ ಸತ್ಯವನ್ನು ಸಾರಿದ್ದಾರೆ.

ವೈಚಾರಿಕ ಮನೋಧರ್ಮವನ್ನು ತಮ್ಮ ಕೃತಿಗಳುದ್ದಕ್ಕೂ ಮೆರೆದ ಕನಕದಾಸರು ಧರ್ಮದ ಮತ್ತೊಂದು ಮುಖವೇ "ನೀತಿಸಂಹಿತೆ" ಎಂಬುದನ್ನು ಈ ಮೂಲಕ ಜಗತ್ತಿಗೆ ನಿರೂಪಿಸಿ ತೋರಿಸಿದ್ದಾರೆ. ಸಮಾಜಕ್ಕೆ ಜ್ಞಾನ, ಭಕ್ತಿ, ವೈರಾಗ್ಯದ ಜೊತೆಗೆ, ಸದಾಚಾರಗಳನ್ನು ಬೋಧಿಸಿದ್ದಾರೆ. ಧರ್ಮದ ಹೆಸರಿನಲ್ಲಿ ಸಮಾಜದೊಳಗೆ ಬೇರು ಬಿಟ್ಟಿದ್ದ ಅನೇಕ ಅನಿಷ್ಟ ಪದ್ಧತಿಗಳು, ಅಂಧಶ್ರದ್ಧೆಗಳನ್ನು ವಿರೋಧಿಸಿ, ಖಂಡಿಸಿದುದರ ಜೊತೆಗೆ ಅಂತಹವುಗಳನ್ನು ಸಮಾಜದಿಂದ ಕಿತ್ತೊಗೆಯುವ ಪ್ರಯತ್ನಕ್ಕಾಗಿ ಅಪಾರ ಶ್ರಮಿಸಿದ್ದಾರೆ.

*** ** ***

## ✣ ✳ ✣ ಅಡಿಟಿಪ್ಪಣಿಗಳು ✣ ✳ ✣

೧. ಸಿ.ಪಿ.ಕೃಷ್ಣಕುಮಾರ್, "ಕಸಾದ", ಪು.೭೯೦, "ಕನಕದಾಸರ ಕೃತಿಗಳು ಧಾರ್ಮಿಕ ಮುಖ"

೨. ಡಾ. ಆರ್.ಕೆ. ಶೇಷಶಾಸ್ತ್ರಿ, ಪು.೨೩೩, "ಕನಕದಾಸರ ಮಾನವೀಯ ಮಿಡಿತಗಳು"

೩. ––"––– ಅದೇ, ಪು. ೨೨೪

೪. ಡಾ. ಎಸ್.ಎಸ್. ಕೋತಿನ. "ಕಸಾದ", ಸಂ–೧, ಪು.೬೮೫

೫. ಡಾ. ಎಸ್.ಎಸ್. ಕೋತಿನ. "ಕಸಾದ", ಸಂ–೧, ಪು.೬೮೫

೬. ಡಾ. ಆರ್.ಕೆ. ಶೇಷಶಾಸ್ತ್ರಿ, "ಕನಕದಾಸರ ಮಾನವೀಯ ಮಿಡಿತಗಳು", ಪು.೨೨೨

೭. ಡಾ. ಆರ್.ಕೆ. ಶೇಷಶಾಸ್ತ್ರಿ, "ಕನಕದಾಸರ ಮಾನವೀಯ ಮಿಡಿತಗಳು", ಪು.೨೨೪

೮. ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್. "ಕನದಾಸರ ತಾತ್ತ್ವಿಕ ದೃಷ್ಟಿಕೋನ", ಪು.೨೩೭.

೯. ಡಾ. ಹಂಪನಾ. "ಕಸಾದ", ಸಂ–೧, "ಕನಕದಾಸರ ಕೃತಿಗಳಲ್ಲಿ ಭಾಷಾಸ್ವರೂಪ", ಪು.೨೭೮

೧೦. ಸಿ.ಪಿ.ಕೃಷ್ಣಕುಮಾರ್, "ಕಸಾದ", "ಕನಕದಾಸರ ಕೃತಿಗಳು ಧಾರ್ಮಿಕ ಮುಖ", ಪು.೭೯೨

✳✳✳ ✳✳ ✳✳✳

## ಅಧ್ಯಾಯ - ೫. : ಐತಿಹಾಸಿಕ ಅಥವಾ ರಾಜಕೀಯ ಪರಿಸರ ಮತ್ತು ಹಿನ್ನೆಲೆ

---

ಕನಕದಾಸರ ಸಮಕಾಲೀನ ರಾಜಕೀಯ ಅಥವಾ ಐತಿಹಾಸಿಕ ಹಿನ್ನೆಲೆ ಮತ್ತು ಪರಿಸರಗಳನ್ನು ಅಧ್ಯಯನ ಮಾಡುವಾಗ ಪ್ರಮುಖವಾಗಿ ನಾವು ಎರಡು ಅಂಶಗಳನ್ನು ಗಮನಿಸಬೇಕಾಗುತ್ತದೆ.

೧. ಕನಕದಾಸರ ವೈಯಕ್ತಿಯ ಜೀವನಕ್ಕೆ ಸಂಬಂಧಿಸಿದ ವಿಷಯ ಮತ್ತು ಮಾಹಿತಿಗಳು.

೨. ಸಮಕಾಲೀನ ರಾಜಕೀಯಕ್ಕೆ ಸಂಬಂಧಿಸಿದ ವಿಷಯ ಮತ್ತು ಮಾಹಿತಿಗಳು.

ಏಕೆಂದರೆ, ಅವರು ಸಮಕಾಲೀನ ರಾಜಕೀಯದೊಡನೆ ನೇರವಾಗಿ ಸಂಬಂಧ ಹೊಂದಿದ್ದರು ಎಂಬುದನ್ನು ನಾವು ಕಾಣುತ್ತೇವೆ.

"ದಂಡನಾಯಕನೂ, ವಿಜಯನಗರದ ಅರಸನ ಸಾಮಂತನೂ ಆಗಿದ್ದ ಆತನಿಗೆ ವಿದ್ವಾಂಸರ, ಕವಿಗಳ ಒಡನಾಟ ಅವರೊಡನೆ ಕಾವ್ಯಾರ್ಥ ಚಿಂತನೆ, ಭಾಗವತರ ಧರ್ಮದ ಪರಿಚಯ, ತಾತಾಚಾರ್ಯರ ಮೂಲಕ ಶ್ರೀವೈಷ್ಣವ ಧರ್ಮದ ಸಹಜ ಒಲವು ಗಾಢವಾಗಿಯೇ ಇದ್ದಂತೆ ತೋರುತ್ತದೆ."[೧] ಮೂಲತಃ ಪಾಳೆಯಗಾರರಾಗಿ ಸಾಮಾಜಿಕವಾಗಿ ಮೇಲುವರ್ಗದವರಾಗಿದ್ದ ಕನಕದಾಸರು ಜಾತಿಯಿಂದ ಕೆಳವರ್ಗದವರಾಗಿದ್ದರು.[೨] ವಿಜಯನಗರದ ಶ್ರೀಕೃಷ್ಣದೇವರಾಯನ ಸಮಕಾಲೀನನಾಗಿ ಆತನ ಅವಧಿಯಲ್ಲಿ ಕೆಲಸ ಮಾಡುತ್ತಿದ್ದ ಇವರು ಆತನೊಡನೆ ನೇರ ಸಂಪರ್ಕದಲ್ಲಿದ್ದಿರಬಹುದಾದ ಸಾಧ್ಯತೆ ಇದೆ. ಈ ಎಲ್ಲಾ ಅಂಶಗಳನ್ನೂ ಇವರ ಕೃತಿಗಳೇ ಒದಗಿಸುವ ಆಧಾರದ ಮೂಲಕ ಪರಿಶೀಲಿಸಬಹುದು.[೩]

"ಸ್ವಾರಿ ಹೊರಟರೆ ಛತ್ರ ಭೇರಿ ನಗಾರಿಗಳು ಭೋರೆಂಬ ಪೊಂಗಹಳೆ ॥"[೪] – ಈ ಕೀರ್ತನೆಯು ಅವರಿಗೆ ದೊರೆತನವಿದ್ದುದು ಸ್ಪಷ್ಟಪಡಿಸುತ್ತದೆ. ಮತ್ತು ಅವರು ಬಹಳ ಪರಾಕ್ರಮಿಯಾಗಿದ್ದುದು, ಅವರಿಗೆ ಪ್ರತ್ಯೇಕ ರಾಜವ್ಯವಸ್ಥೆ ಇದ್ದುದು– ಈ ಎಲ್ಲವನ್ನೂ ತಿಳಿಸುತ್ತದೆ. "ಕಂದಾಯವನ್ನು ವಸೂಲಿ ಮಾಡುವುದು, ಕರೆ ಬಂದಾಗ ಅರಸನಿಗೆ ಯುದ್ಧದಲ್ಲಿ ನೆರವಾಗುವುದು"– ಬೀರಪ್ಪನ ಕೆಲಸವಾಗಿತ್ತು; ಕನಕದಾಸರ ಕಾಲಕ್ಕೂ ಹಾಗೆಯೇ ಅದು ಮುಂದುವರೆಯಿತು.[೫]

ಕ್ರಿ.ಶ. ೧೩೩೬ರಲ್ಲೇ ಸ್ಥಾಪನೆಗೊಂಡ ವಿಜಯನಗರ ಸಾಮ್ರಾಜ್ಯವನ್ನು ಈಗಾಗಲೇ ವಶಪಡಿಸಿಕೊಳ್ಳುವ ಸಲುವಾಗಿ ಮೊಹಮ್ಮದೀಯರು ದಕ್ಷಿಣಭಾರತದ ಕಡೆಗೆ ಲಗ್ಗೆ ಇಡುವುದಕ್ಕಾಗಿ ಹವಣಿಕೆ ನಡೆಸಿದ್ದರು. ಇಷ್ಟರಲ್ಲಾಗಲೇ

ಅವರು ಉತ್ತರಭಾರತದ ಹಲವೆಡೆಗಳಲ್ಲಿ ತಮ್ಮ ವಿಜಯಪತಾಕೆ ಹಾರಿಸಿದ್ದರು. ಈಗ ಸನಾತನ ಹಿಂದೂ ಸಂಸ್ಕೃತಿಯನ್ನು ರಕ್ಷಿಸುವ ಹೊಣೆ ವಿಜಯನಗರ ಅರಸರ ಪಾಲಿನದಾಗಿತ್ತು. ಈ ವೇಳೆಗಾಗಲೇ ವಿಜಯನಗರ ಸಾಮ್ರಾಜ್ಯವು ಬೃಹತ್ ಪ್ರಮಾಣದಲ್ಲಿ ಬೆಳೆದು ನಿಂತಿತ್ತು.

ಈ ಸಾಮ್ರಾಜ್ಯದ ಆರಂಭ ಕಾಲದ ಅರಸರುಗಳು "ಮಹಾಮಂಡಲೇಶ್ವರ" ಎಂಬ ಬಿರುದಿಗೆ ಪಾತ್ರರಾಗಿದ್ದರು. ಆದರೆ ಆನಂತರ ಬಂದ ಅರಸರುಗಳು ವೈಭವಕ್ಕೆ ಕಟ್ಟುಬಿದ್ದು; ಸಾಮ್ರಾಜ್ಯ ವಿಸ್ತರಣೆ ಕಡೆಗೇ ಹೆಚ್ಚು ಮನಸೋತು ಯುದ್ಧದ ಮೇಲೆ ಯುದ್ಧಗಳನ್ನು ಮಾಡಲಾರಂಭಿಸಿದರು. ಇದರಿಂದಾಗಿ ದಿಗ್ವಿಜಯ ಯಾತ್ರೆಗಳ ಸಂಖ್ಯೆ ದಿನದಿಂದ ದಿನಕ್ಕೆ ಕ್ರಮೇಣ ಹೆಚ್ಚುತ್ತಲೇ ಹೋಯಿತು. ಸ್ವಧರ್ಮೀಯರ ಮೇಲೆ ಯುದ್ಧ ಮಾಡಲೂ ಇವರೂ ಲೆಕ್ಕಿಸಲಿಲ್ಲ.[೬] ನೆರೆಹೊರೆ ರಾಜ್ಯಗಳು, ಅವುಗಳ ಭಂಡಾರಗಳನ್ನು ಸ್ವಾಧೀನಕ್ಕೆ ತೆಗೆದುಕೊಂಡರು. ಹೀಗೆ ತಮ್ಮ ಅನೈತಿಕ ವರ್ತನೆಗಳಿಂದಾಗಿ ತಮ್ಮ ರಾಜ್ಯದೊಳಗೆ ಆಂತರಿಕ ಹಿತಶತ್ರುಗಳನ್ನು ಪಡೆಯುವಂತಾಯಿತು. ಅಷ್ಟೇ ಅಲ್ಲ; ತಮ್ಮ ರಾಜ್ಯದ ಮೇಲೆ ಪರಕೀಯರ ಆಕ್ರಮಣವನ್ನು ಆಹ್ವಾನಿಸಿದಂತಾಯಿತು.

'॥ ಗಳಿಸದಿರು ಸೀಮೆಯನು ಗಳಿಸದಿರು ದ್ರವ್ಯವನು ॥ ಗಳಿಸದಿರು ನೀ ದುರಿತ ರಾಶಿಗಳನು ॥'– ಎಂದು ಹಾಡಿದ್ದಾರೆ.

ರಾಜ್ಯವಿಸ್ತರಣೆ ಮಾಡುತ್ತಾ, ಭಂಡಾರ ತುಂಬುತ್ತಾ ಬಂದಂತೆ, ವಿಜಯನಗರ ಅರಸರ ದಾಯಾದಿಗಳು, ಉನ್ನತ ಸ್ಥಾನಗಳನ್ನು ಅಲಂಕರಿಸಿದ್ದ ಅಧಿಕಾರಿ ವರ್ಗಗಳಲ್ಲೂ, ಸಾಮಂತ ಅರಸರುಗಳಲ್ಲೂ ಅತೀವ ಲೋಭ, ಮೋಹ, ಲಾಲಸೆಗಳುಂಟಾಗಿ ಸಾಮ್ರಾಜ್ಯದ ಒಳಗೂ, ಹೊರಗೂ ಮೇಲಿಂದ ಮೇಲೆ ಒಳಸಂಚು, ಪಿತೂರಿ, ರಾಜಹತ್ಯೆ, ಶಿಶುಹತ್ಯೆಗಳು ಸ್ವಜನ ಪಕ್ಷಪಾತ, ಸಿಂಹಾಸನದ ದುರಾಕ್ರಮಣ– ಇವೇ ಮೊದಲಾದ ದುರ್ಘಟನೆಗಳು ನಡೆದವು. ಹೀಗಾಗಿ ಸಾಮ್ರಾಜ್ಯವು ತನ್ನ ಅಂತಃಸತ್ವವನ್ನೂ ಕ್ರಮೇಣ ಕಳೆದುಕೊಳ್ಳುತ್ತಾ ಬಂದಿತು. ಆಮಿಷಗಳು, ಉನ್ಮಾದಕ್ಕೆ ಒಳಗಾದ ಅಧಿಕಾರಿಗಳು–ಆಡಳಿತವರ್ಗ–ಸಿರಿವಂತರು, ಜನಸಾಮಾನ್ಯರಲ್ಲೂ ಕಪಟ, ಡಾಂಭಿಕತೆ ಅತಿಯಾಗಿ ತಲೆದೋರಿತು. ಪರಿಣಾಮವಾಗಿ ಸಾಮಾಜಿಕ ಜನಜೀವನದಲ್ಲಿ ಧಾರುಣ ಪರಿಸ್ಥಿತಿ ಅತಿಯಾಗಿ ತಲೆದೋರಿತು. ಪರಿಣಾಮವಾಗಿ ಸಾಮಾಜಿಕ ಜನಜೀವನದಲ್ಲಿ ಧಾರುಣ ಪರಿಸ್ಥಿತಿ ಉಂಟಾಯಿತು. ಕಳ್ಳಕಾಕರರು, ಬೊಗಳೆ ಜಂಗಮರು, ಕಳ್ಳ ಸನ್ಯಾಸಿಗಳು ತಮ್ಮ ಹೊಟ್ಟೆ ಹೊರುವುದಕ್ಕಾಗಿ ಕಾರ್ಯ ಪ್ರವೃತ್ತರಾದರು.

–ಹೀಗೆ ಕೆಲವೇ ದಶಕಗಳ ನೈತಿಕ ಸಾಧನಗೆಗಳ ನಂತರ ಕನಕದಾಸರ ಕಾಲದಲ್ಲಿ ಸಾಮ್ರಾಜ್ಯವು ನಶಿಸಲಾರಂಭಿಸಿತು. ಹಂಪೆ ಸಾಮ್ರಾಜ್ಯದ ಇಂದಿನ ಕಾಲದ ಭೀಕರ ಪರಿಸ್ಥಿತಿಯನ್ನೇ ಹೋಲುತ್ತಿತ್ತೆಂದರೆ ಬಹುಶಃ ತಪ್ಪಾಗಲಾರದು.[೭]

ಇದನ್ನೆಲ್ಲಾ ತಮ್ಮ ಅನುಭವದಲ್ಲಿ ಕಂಡ ಕನಕದಾಸರು, ಅಂದಿನ ಕಾಲದ ಸಮಾಜವನ್ನು ಪೀಡಿಸುತ್ತಿದ್ದಂತಹ ಅಪಮೌಲ್ಯಗಳನ್ನು ಕುರಿತ ಆಪಾದನೆಗಳ ಪಟ್ಟಿ ಮಾಡುವಂತೆ ತಮ್ಮ ಕೀರ್ತನೆಗಳಲ್ಲಿ ಎಳೆ ಎಳೆಯಾಗಿ ಬಿಡಿಸಿಟ್ಟಿದಾರೆ. ಮತ್ತು ಸಮಕಾಲೀನ ಸಾಮಾಜಿಕ, ರಾಜಕೀಯ, ಆರ್ಥಿಕ ಒತ್ತಡಗಳನ್ನೆಲ್ಲಾ ಐತಿಹಾಸಿಕ ದೃಷ್ಟಿಯಿಂದ ಗಮನಿಸಿ ಅವುಗಳನ್ನೆಲ್ಲಾ ತಮ್ಮ ಸಮಾಜಮುಖಿ ಕೀರ್ತನೆಗಳಲ್ಲಿ ಅಚ್ಚೊತ್ತಿದ್ದಾರೆ.

ಕ್ರಿ.ಶ.೧೫೦೯ರಲ್ಲಿ ಅಧಿಕಾರಕ್ಕೆ ಬಂದ ಶ್ರೀಕೃಷ್ಣದೇವರಾಯನು ಕನಕದಾಸರನ್ನು "ಬಾಡ, ಬಂಕಾಪುರ, ಕಾಗಿನೆಲೆ"– ಇವೇ ಮೊದಲಾದ ಪ್ರಾಂತ್ಯಕ್ಕೆ ದಂಡನಾಯಕನಾಗಿ ನೇಮಿಸಿರುತ್ತಾನೆ. ಆದರೆ, ಆನಂತರ ಆತನ ತಮ್ಮ ಅಧಿಕಾರಕ್ಕೆ ಬಂದ ಅಚ್ಯುತರಾಯನು ಆಡಳಿತಕ್ಕೆ ಬಂದ ಸ್ವಲ್ಪ ಸಮಯದಲ್ಲೇ ಕನಕದಾಸರು ದೇವರು, ಉತ್ಸವ, ಜಾತ್ರೆ... ಎಂದು ಹೀಗೆ ಹಣವ್ಯಯ ಮಾಡಿ ದುಂದು ಖರ್ಚು ಮಾಡುತ್ತಿದ್ದಾರೆಂದು ಅವರನ್ನು ಅಧಿಕಾರದಿಂದ ಪದಚ್ಯುತಿಗೊಳಿಸಿದನು ಎಂಬುದನ್ನು ಈ ಕೀರ್ತನೆಯು ದೃಢಪಡಿಸುತ್ತದೆ.

'ಆರಿಗಾರಿಲ್ಲ ಆಪತ್ಕಾಲದೊಳಗೆ । ಸಾಲದವರೆಳೆವಾಗ ಹಸಿದು ಬಳಲುವಾಗ ।
ಚಾಡಿ ಮಾತಿಗೆ ಭೂಪ ಘುಳುಘುಳಿಸುತ ಕೋಪವನು ॥
। ನಿಂದೆ ಹೊಂದಿರುವಾಗ ಪದವಿ ತಪ್ಪಿರುವಾಗ ॥'[೮]

–ಎಂಬ ಈ ಕೀರ್ತನೆಯಲ್ಲಿ ಇಡೀ ಚರಿತ್ರೆಯ ಪರಿಚಯ ನಮಗಾಗುತ್ತದೆ. ಕನಕದಾಸರು ಇಲ್ಲಿ ತಮಗಾದ ಅಪಮಾನವನ್ನು ಚಿತ್ರಿಸಿದ್ದಾರೆ.

'॥ ಅಲ್ಪ ದೊರೆಗಳ ಜೀತ ಎಷ್ಟು ಮಾಡಿದರೇನು ? । ಬಲ್ಪಂಥವಿಲ್ಲದವನ ಬಾಳ್ವೆಯೇನು ? ।
ಸ್ವಲ್ಪವೂ ನೆನೆಯದ ನರನಿದ್ದರೇನು ? ॥'[೯]

ರಕ್ಕಸತ್ತಂಗಡಿ ಯುದ್ಧದಲ್ಲಿ ವಿಜಯನಗರ ಸಾಮ್ರಾಜ್ಯವು ಪತನವಾಗಿ ಹೋದ ನಂತರ ನಾಡಿನ ತುಂಬೆಲ್ಲಾ ಮುಸಲ್ಮಾನರ ಕಾರುಬಾರೇ ಹೆಚ್ಚಾಗಿಹೋಯಿತು. ಇದರಿಂದ ತಬ್ಬಿಬ್ಬುಗೊಂಡ ನಾಡಿನ ಜನತೆ ಕೇವಲ ದಿಕ್ಕಾಪಾಲಾಗಿ ಚದುರಿಹೋಗದೆ, ತಮ್ಮ ನೈತಿಕತೆಗೆ ಸಂಬಂಧಿಸಿದ ನ್ಯಾಯ–ನೀತಿ–ಧರ್ಮಗಳನ್ನೂ ತೊರೆದು ಚೆಲ್ಲಾಪಿಲ್ಲಿ ಮಾಡಿಬಿಟ್ಟರು. ಇದನ್ನು ದಾಸರು ಈ ಕೀರ್ತನೆಯಲ್ಲಿ ಸ್ಪಷ್ಟಪಡಿಸಿದ್ದಾರೆ.

'॥ ಕಲಿಯು ಹೆಚ್ಚಿತಲ್ಲ । ಬಲು ಘೋರ ಪಾತಕದಿ ಇಳೆಯು ತಲ್ಲಣಗೊಂಡು ॥
ಕಳವಳಿಸುತಿದೆ ಕಾಲ ವಿಪರೀತದಿ । ನಿತ್ಯ ನೇಮವು ನಿಂತಿತು ॥
ಜಾತಿ ನೀತಿಗಳೆಲ್ಲ ಒಂದಾಗಿ । ಪಾತಕದಿ ಮನವೆರಗಿ ಮೋಹಿಸುತ ॥
ಮಾತಾಪಿತೃ ಗುರು ದೈವ ದ್ರೋಹದಿ ಭೂತಳು ನಡ ನಡುಗುತಿಹುದು ॥'[೧೦]

'॥ ಕಲಿಯುಗದ ಮಹಿಮೆಯನು ಕಂಡಷ್ಟು ಪೇಳುವೆನು ॥
ಸತ್ಯಧರ್ಮಗಳೆಲ್ಲ ಎತ್ತ ಪೋದವೋ ಕಾಣೆ । ಉತ್ತಮರ ಜೀವನಕೆ ದಾರಿಯಿಲ್ಲ ॥
ವೇದ ವಿಪ್ರರು ತಮ್ಮ ವೃತ್ತಿ ಸ್ವಾಸ್ಥ್ಯವ ಕಳೆದು । ಆಧಾರವಿಲ್ಲದೆ ತಿರಿದು ತಿಂಬುವರು [೧೧]
ನಿತ್ಯದಲಿ ವ್ಯಭಿಚಾರವುಳ್ಳವರೆಲ್ಲ । ಅರ್ಥಸಂಪನ್ನರಾಗನುಭವಿಸುತಿಹರು ॥

ಕಾಡುವ ಶೂರರಿಗೆ ಕಾಸು ಕೊಡುವವರಿಲ್ಲ । ಮೇದಿನಿಗೆ ಬೀಳ್ವ ಮಳೆ ಖಂಡಮಂಡಲವು ॥'11
'॥ ಧರ್ಮವಿಲ್ಲದ ಅರಸು ಮುರಿದ ಕಾಲಿನ ಗೊರಸು । ನಿರ್ಮಲಿಲ್ಲದ ಮನಸು ಅದು ಕಜ್ಜಿ ತಿನಿಸು ॥'[೧೨]

'॥ ಕುಳಿತ ಸಭೆಯೊಳು ಕುಹಕ ಮಾತಾಡುವಾತನ ಸಂಗ । ಬಲು ಬೇಡೆ ಕೊಡದಿರುವ ಲೋಭಿ ಸಂಗ ।
ಕುಲಹೀನರ ಕೂಡೆ ಸ್ನೇಹ ಬೆಳೆಪನ ಸಂಗ । ಹಲವು ಮಾತಾಡಿ ಆಚರಿಸದವನ ಸಂಗ ನಾನೊಲ್ಲೆ ॥'[೧೩]

'॥ ಅಂದಣ ಪಲ್ಲಕ್ಕಿ ಏರಿ ಮಂದಿ ಮಾರ್ಬಲ ಕೂಡಿ । ಚಂದದಿಂದ ಮೆರೆಯುವುದು ಹೊಟ್ಟೆಗಾಗಿ ॥'[೧೪]

–ಈ ಕೀರ್ತನೆಯಲ್ಲಿ ರಾಜ್ಯದ ಜನತೆಯ ಹಿತವನ್ನು ಮರೆತು ರಾಜಧರ್ಮವನ್ನೇ ಕೈಬಿಟ್ಟು ಅಕ್ರಮವಾಗಿ ಸಿಂಹಾಸನಾರೂಢರಾದ ಅರಸರ ದುಷ್ಟ ವರ್ತನೆಗಳನ್ನು ನಿದರ್ಶನ ಸಹಿತವಾಗಿ ಚಿತ್ರಿಸುರುವ ಕೀರ್ತನೆಗಳು ಅಂದಿನ ಕಾಲದ "ಮರೆತುಹೋದ ಸಾಮ್ರಾಜ್ಯ"ದ ಇತಿಹಾಸವನ್ನೇ ನಮ್ಮ ಮುಂದೆ ಸಚಿತ್ರಸಹಿತವಾಗಿ ತೆರೆದಿಡುತ್ತವೆ.

*** ** ***

## ✣ ⁜ ✣ ಅಡಿಟಿಪ್ಪಣಿಗಳು ✣ ⁜ ✣

೧. ಡಾ. ಎ. ಎಸ್. ವೇಣುಗೋಪಾಲ ರಾವ್, "ಕಸಾದ", ಸಂ–೧, ಪು.೨೬೪

೨. ಡಾ. ಎಸ್. ಎಸ್. ಕೋತಿನ, "ಕಸಾದ", ಪು.೬೮೫

೩. ರಾಗೌ "ಕನಕದಾಸರಲ್ಲಿ ಐತಿಹಾಸಿಕ ಅಂಶಗಳು", ಪು.೭೨೭

೪. ಕನಕದಾಸರ ಕೀರ್ತನೆಗಳು, ಪದ್ಯ–೧೭೩

೫. ಹೆಚ್. ಎಮ್. ಶಂಕರನಾರಾಯಣರಾವ್, "ನಳಚರಿತ್ರೆ ಸಂಗ್ರಹ", ಪು.೧೪

೬. ಕೊ.ವ್ಯಾ. ರಮೇಶ್, "ಕನಕದಾಸರ ಕಾಲದ ರಾಜಕೀಯ, ಸಾಮಾಜಿಕ, ಧಾರ್ಮಿಕ ಹಿನ್ನೆಲೆ", ಪು.೮೬೩

೭. ಕೊ.ವ್ಯಾ. ರಮೇಶ್, "ಕನಕದಾಸರ ರಾಜಕೀಯ, ಸಾಮಾಜಿಕ, ಧಾರ್ಮಿಕ– ಹಿನ್ನೆಲೆ", ಪು.೮೬೪

೮. "ಕಸಾದ", ಪದ್ಯ–೫೬, ಪು.೫೦

೯. "ಕಸಾದ", ಪದ್ಯ–೧೭೩, ಪು.೧೬೧

೧೦. "ಕಸಾದ", ಪದ್ಯ–೧೭೯, ಪು.೧೬೭

೧೧. "ಕಸಾದ", ಪದ್ಯ–೧೭೮, ಪು.೧೬೫

೧೨. "ಕಸಾದ", ಪದ್ಯ–೧೭೧, ಪು.೧೫೯

೧೩. "ಕಸಾದ", ಪದ್ಯ–೧೮೩, ಪು.೧೭೨

೧೪. "ಕಸಾದ", ಪದ್ಯ–೧೬೩, ಪು.೧೭೫

*** ** ***

## "ಅಧ್ಯಾಯ - ៩: ಸಾಂಕಸ್ಕೃತಿಕ ಪರಿಸರ ಮತ್ತು ಹಿನ್ನಲೆ"

### ಅ) ಸಮಾಜಮುಖಿ ಅಧ್ಯಯನದ ಸಾಂಸ್ಕೃತಿಕ ಹೊಳಹುಗಳು :-

"ಸಮಾಜ" ಮತ್ತು "ಸಂಸ್ಕೃತಿಗಳೆರಡೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಅವು ಒಂದಕ್ಕೊಂದು ಪೂರಕ ಮತ್ತು ಪೋಷಕ. ಹೇಗೆ "ಸಮಾಜ" ಎಂಬ ಕಟ್ಟಡಕ್ಕೆ "ಮನುಷ್ಯ"ರೆಂಬ ಇಟ್ಟಿಗೆಗಳು ಅತ್ಯವಶ್ಯಕವೋ ಅದೇರೀತಿ, "ಸಂಸ್ಕೃತಿ" ನಿರ್ಮಾಣಕ್ಕೆ "ಸಮಾಜ"ವು ಅತ್ಯವಶ್ಯಕವಾಗಿದೆ. ಸಮಾಜವಿಲ್ಲದೆ ಸಂಸ್ಕೃತಿ ಇಲ್ಲ. ಸಂಸ್ಕೃತಿಯಿಲ್ಲದ ಸಮಾಜವೂ ಇಲ್ಲ.

ಇ.ಬಿ.ಟೈಲರ್ ಹೇಳುವಂತೆ,

ಜ್ಞಾನ, ನಂಬಿಕೆ, ಕಲೆ, ನೈತಿಕ ನಿಯಮಗಳು, ಕಾನೂನು ಪದ್ಧತಿ ಮತ್ತು ಮಾನವನನ್ನು ತನ್ನ ಸಮಾಜದ ಸದಸ್ಯನಾಗಿ ಪಡೆದುಕೊಂಡಿರುವ ಇಂಥಹ ಎಲ್ಲ ಸಾಮರ್ಥ್ಯಗಳನ್ನೂ ಒಳಗೊಂಡಿರುವ ಅಖಂಡ ಸಂಕೀರ್ಣ ವ್ಯವಸ್ಥೆಯೇ "ಸಂಸ್ಕೃತಿ".

ಯಾವುದೇ ಒಂದು ನಾಡಿನ ಸಂಸ್ಕೃತಿಯ ಇತಿಹಾಸವನ್ನು ಸೂಕ್ಷ್ಮವಾಗಿ ನಾವು ಪರಿಶೀಲಿಸಿದಾಗ, ಪ್ರತಿಯೊಂದು ತಲೆಮಾರು ಮುಂದೆ ಬೆಳೆಯುತ್ತಾ ಹೋದಂತೆ, ಅದು ತನ್ನ ಹಿಂದಿನ ಸಂಸ್ಕೃತಿಯ ತಲೆಮಾರಿಗಿಂತ ಒಂದು ಹೆಜ್ಜೆ ಮುಂದಿಟ್ಟು ನಡೆದಿರುವುದನ್ನೇ ಗಮನಿಸುತ್ತೇವೆ. ಅಂತೆಯೇ, ಒಂದು ಕಾಲದಲ್ಲಿ ಅತ್ಯಂತ ಶ್ರೇಷ್ಠ ಜೀವನ ಮೌಲ್ಯವೆಂದು ಪರಿಗಣಿಸಿದ್ದು; ಮುಂದೆ ಅದು ತನ್ನ ಮೌಲ್ಯವನ್ನು ಕಳೆದುಕೊಳ್ಳಬಹುದು ಅಥವಾ ಕಳೆಧುಕೊಂಡಿರಲೂ ಬಹುದು. ಇದಕ್ಕೆ ಬಹು ಮುಖ್ಯ ಕಾರಣ "ಬದಲಾಗುತ್ತಿರುವ" ಅಥವಾ "ಬೆಳೆಯುತ್ತಿರುವ ಸಂಸ್ಕೃತಿ"ಯೇ ಆಗಿದೆ.

ಕನಕದಾಸರ ಸಾಮಾಜಿಕ ಕೀರ್ತನೆಗಳ ಅಧ್ಯಯನದಿಂದ ನಮಗೆ ಅವರ ಸಮಕಾಲೀನ ಸಮಾಜದ ಸಾಂಸ್ಕೃತಿಕ ವಿಚಾರಗಳ ಪರಿಚಯವಾಗುತ್ತದೆ. ಕನಕದಾಸರ ಕೀರ್ತನೆಗಳ ಮೂಲಭೂತ ಪ್ರೇರಣೆ ಮತ್ತು ಆಶಯ ಒಂದು ನಾಡಿನ ಅಖಂಡ ಸಂಸ್ಕೃತಿಯನ್ನು ಕುರಿತ ಹಿತಚಿಂತನೆ ಆ ಸಂಸ್ಕೃತಿಯ ಕಳಕಳಿಯ ಜವಾಬ್ದಾರಿಗೆ ಸೇರಿದ್ದು. ಸಮಕಾಲೀನ ಬದುಕಿನ ರೀತಿ-ನೀತಿ, ಶ್ರದ್ಧೆ, ಸಂಪ್ರದಾಯ-ನಂಬಿಕೆ-ಆಚರಣೆ, ಅಡಿಗೆ-ತೊಡಿಗೆ, ಸ್ವಭಾವ, ಪ್ರವೃತ್ತಿಗಳನ್ನು ಬಿಟ್ಟು ಒಂದು ಸಂಸ್ಕೃತಿಯ ಅನಂತ ಪದರುಗಳ ಸಮಸ್ತ ಪಾರ್ಶ್ವಗಳ ಮನೋಹರವಾದ ಜೀವಂತ ಚಿತ್ರಣಗಳನ್ನು ಅದರ ಧಾರ್ಮಿಕ, ಶೈಕ್ಷಣಿಕ, ಆರ್ಥಿಕ, ರಾಜಕೀಯ ನೆಲೆಯಲ್ಲಿ ಒದಗಿಸಿಕೊಡುತ್ತದೆ.[೧]

ಯಾವುದೇ ಒಂದು ಕೃತಿಯ ಅಥವಾ ಕೃತಿಗಳ "ಸಾಂಸ್ಕೃತಿಕ ಅಧ್ಯಯನ" ಅಂದರೆ, ಆ ಕೃತಿಯನ್ನು ರಚಿಸಿದ "ವ್ಯಕ್ತಿಯ ಅಧ್ಯಯನ"ವೂ ಆಗಿರುತ್ತದೆ. ಆ ಕೃತಿಯು ತನ್ನ ಸಮಕಾಲೀನ ಧಾರ್ಮಿಕ, ಸಾಮಾಜಿಕ, ರಾಜಕೀಯ

ಸ್ಥಿತಿ–ಗತಿಗಳೊಂದಿಗೆ ಸಾಂಸ್ಕೃತಿಕ ಪರಿಸರಗಳಿಂದಲೂ ಪ್ರೇರಣೆ–ಪ್ರಭಾವಗಳನ್ನು ಪಡೆದಿರುವುದನ್ನು ನಾವು ಕಾಣುತ್ತೇವೆ. ಇಂತಹ ಪ್ರಭಾವಗಳನ್ನು ವಿವೇಚಿಸಿದ ಹೊರತು ಆ ಕೃತಿಯ ವ್ಯಾಖ್ಯಾನ ಸಮಗ್ರವಾಗುವುದಿಲ್ಲ. ಮತ್ತು ಆತನ ಕೃತಿಗಳೂ ಅವುಗಳ ರಚನಕಾರನ ಆಲೋಚನಾ ವಿಧಾನವನ್ನು, ಜೀವನಧೋರಣೆಯನ್ನು ತಿಳಿಯುವಲ್ಲಿ ನಮಗೆ ನೆರವಾಗುತ್ತವೆ. ಹೀಗೆ ವ್ಯಕ್ತಿ ಮತ್ತು ಕೃತಿಗಳ ಅಧ್ಯಯನ ಒಂದಕ್ಕೊಂದು ಪೂರಕ ಮತ್ತು ಪೋಷಕವಾಗಿರುವುದನ್ನು ನಾವು ಕಾಣುತ್ತೇವೆ.

"ಸಾಂಪ್ರದಾಯಿಕ ನಡವಳಿಕೆಗಳ ವ್ಯವಸ್ಥಿತ ಸಂಚಯವೇ ಸಂಸ್ಕೃತಿ". ಆ ತಿಳವಳಿಕೆಗಳು ಕಲೆ ಮತ್ತು ಮಾನವ ನಿರ್ಮಿತ ವಸ್ತುಗಳಲ್ಲಿ ಸ್ಪಷ್ಟವಾಗಿ ವ್ಯಕ್ತವಾಗುವುದಲ್ಲದೆ ಸಂಪ್ರದಾಯದ ಮುಖಾಂತರ ಮುಂದುವರೆದು ಮಾನವ ಸಮೂಹಕ್ಕೆ ವೈಶಿಷ್ಟ್ಯ ನೀಡುತ್ತದೆ.[೨]

ಎಂದು ರೆಡ್‌ಫೀಲ್ಡ್‌ನು ವ್ಯಾಖ್ಯಾನ ಮಾಡಿದ್ದಾನೆ. ಈ ಹಿನ್ನೆಲೆಯಲ್ಲಿ ಕನಕದಾಸರ ಸಮಕಾಲೀನ ಸಮಾಜದಲ್ಲಿ ಎಂತಹ "ಸಂಸ್ಕೃತಿ" ಇತ್ತು ? ಎನ್ನವುದೊಂದು ಮುಖ್ಯ ಪ್ರಶ್ನೆ ನಮ್ಮ ಮುಂದೆ ಉದ್ಭವಿಸುತ್ತದೆ.

"ಸಮಾಜಶಾಸ್ತ್ರ"ವು ಸಾಮಾಜಿಕ ಜೀವನ, ಸಾಮಾಜಿಕ ಒಡನಾಟ, ಸಾಮಾಜಿಕ ನಡವಳಿಕೆಯ ಅಧ್ಯಯನವಾದರೆ, "ಸಂಸ್ಕೃತಿ" ಎಂದು ಕರೆಯುವ ಸಂಪ್ರದಾಯವು ಸಾಮಾಜಿಕ ಜೀವನದಲ್ಲಿ ಬಹು ಮುಖ್ಯ ವಿಷಯವಾಗಿ ಪರಿಣಮಿಸುತ್ತದೆ. ಹಾಗೆಯೇ ಪ್ರತ್ಯೇಕ ಸಾಮಾಜಿಕ ಒಡನಾಟಗಳಿಂದ ಪ್ರತ್ಯೇಕ ವ್ಯಕ್ತಿಗಳು ನಿರ್ಮಾಣವಾಗುತ್ತವೆ.[೩] ಪೀಳಿಗೆಯಿಂದ ಕಲಿಕೆಯ ಮೂಲಕ ಪೀಳಿಗೆಯಿಂದ ಪೀಳಿಗೆಗೆ ಸಾಗಿಬರುವ ನಡವಳಿಕೆಯನ್ನು "ಸಂಸ್ಕೃತಿ" ಎಂದು ಕರೆಯಲಾಗಿದೆ. ಸಂಸ್ಕೃತಿಯ ಆವಿಷ್ಕಾರಗಳನ್ನು ಅಥವಾ ಒಂದು ಪದ್ಧತಿಯಲ್ಲಿ ಸಂಘಟಿತವಾದ ಸಂಸ್ಕೃತಿಯ ವಿಶಿಷ್ಟ ಲಕ್ಷಣಗಳನ್ನು ಪಡೆದಿರುತ್ತದೆ. ಸಂಪ್ರದಾಯದೊಡನೆ ಎಡೆಬಿಡದೆ ಬಂದಿರುವ ಪದ್ಧತಿಗಳೇ "ಸಂಸ್ಕೃತಿ".[೪]

"ದಾಸ ಸಾಹಿತ್ಯ"ದ ಸೊಬಗನ್ನು ಕನಕದಾಸರು ಹೆಚ್ಚಿಸಿದಂತೆಯೇ, ಕನ್ನಡ ಸಾಹಿತ್ಯ ಪರಂಪರೆ, ವಾಙ್ಮಯ ಸಾಹಿತ್ಯರಂಗವನ್ನೂ ಶ್ರೀಮಂತಗೊಳಿಸಿದಂತಹ

ಧೀಮಂತ ವ್ಯಕ್ತಿ. ಇಂತಹವರ ಬಗ್ಗೆ ಅನೇಕ ಕತೆಗಳು, ಪವಾಡಗಳು ಊಹಾಪೋಹವಾಗಿ ಸೃಷ್ಟಿಯಾಗಿದ್ದು, ನಿಜವಾದ ಸತ್ಯವು ಇದರ ಹಿಂದೆ ತಲೆಮರಿಸಿಕೊಂಡಿರುವುದನ್ನು ನಾವು ಕಾಣುತ್ತೇವೆ. ಪೂರ್ವಾಗ್ರಹ ಎಲ್ಲವನ್ನೂ ಹಾಳುಮಾಡಿಬಿಡುತ್ತದೆ. ಇದಕ್ಕೆ ಕನಕದಾಸರೂ ಕೂಡಾ ಹೊರತಾಗಿಲ್ಲ. ಇದಕ್ಕೆ ಒಂದು ಉತ್ತಮ ನಿದರ್ಶನವನ್ನು ಹೇಳುವುದಾದರೆ, ಇಂತಹ ಮಹಾಪುರುಷರ "ಇತಿಹಾಸ" ಈ ಸಮಾಜದೆದುರಿಗೆ ಗೋಜಲುಮಯವಾಗಿರುವುದೇ ಆಗಿದೆ.

"ಹುಟ್ಟಿನಿಂದ ಶೂದ್ರರಾದ ಇವರನ್ನು ಉಡುಪಿಯ ಕೃಷ್ಣ ದೇವಾಲಯದೊಳಗೆ ದರ್ಶನಕ್ಕೆ ಬಿಡಲಿಲ್ಲ. ಕನಕದಾಸರಿಗಾಗಿ ಕೃಷ್ಣ ತಿರುಗಲೂ ಇಲ್ಲ". ಎಂದು ಸ್ಪಷ್ಟವಾಗಿ ತಿಳಿದಿದ್ದರೂ "ಅದೇ ಸತ್ಯ"! ಎಂದು ವಾದಿಸುವವರ ಕ್ರೂರತನ, ಕ್ರೌರ್ಯವನ್ನೇ ನಾವು ಆಧ್ಯಾತ್ಮಿಕ ಪರಿಭಾಷೆಯಲ್ಲಿ ನಾವು "ತಾಮಸ ಪ್ರವೃತ್ತಿ", "ತಾಮಸ ಆನಂದ"

ಎನ್ನುತ್ತೇವೆ. ಅದೇರೀತಿ, "ಕನಕದಾಸರಿಗೆ ಬ್ರಾಹ್ಮಣರು ಹಿಗ್ಗಾಮುಗ್ಗಾ ಹೊಡೆದರು !" ಎಂದು ವಾದಿಸುವವರಲ್ಲೂ ಏನೋ ಒಂದು ಬಗೆಯ ಖುಷಿ. ಇದು ಮತ್ತೊಂದು ಬಗೆಯ ತಾಮಸ ಪ್ರವೃತ್ತಿ.

ಉಡುಪಿ ಶ್ರೀಕೃಷ್ಣ ಮಠದ "ಕನಕನ ಕಿಂಡಿ" ಕನಕದಾಸರ ಸಮಕಾಲೀನ ಸಮಾಜದ ಸಂಸ್ಕೃತಿಯನ್ನು ಸಮರ್ಥಿಸುತ್ತದೆ. ಕನಕರಿಗೆ ಕಂಡ ಅರಿವಿನ ಬೆಳಕು, ಸದಾ ಪೂಜಿಸುತ್ತಿದ್ದ ಅರ್ಚಕರಿಗೆ ಕಾಣಲಿಲ್ಲ. ಕನಕದಾಸರ ಭಕ್ತಿಗೆ ಕಲ್ಲು ಕರಗಿ, ಕಿಂಡಿಯೊಡೆದು ದರ್ಶನ ಭಾಗ್ಯ ದೊರೆಯಿತು. ಅರ್ಚಕರ ಹೃದಯ ಮಾತ್ರ ಪಾಷಾಣವಾಗಿತ್ತು.[೫]

"ನೀವು ಅಪ್ಪಟ ಬ್ರಾಹ್ಮಣರಾದರೆ, ನಿಮಗೆ ಕನಕದಾಸರು ಅರ್ಥವಾಗುವುದಿಲ್ಲ. ಮಠಗಳು, ಮಡಿವಂತಿಕೆಯಿಂದ ದಾಸರನ್ನು ಹೊರಗಿಡಬೇಕು. ಹಾಗೆಯೇ, ಬ್ರಾಹ್ಮಣತ್ವ, ಶೂದ್ರತ್ವದಿಂದ ಮೇಲೇರಿ ನಿಂತು ದಾಸರನ್ನು ಅವರ ಸಾಹಿತ್ಯವನ್ನು ಮುಟ್ಟಬೇಕು. ಮಠಗಳು, ವಿ.ವಿ.ಗಳಿಂದ ದೂರ ನಿಂತು ದಾಸಸಾಹಿತ್ಯದ ಚಿಂತನೆಗೆ ತೊಡಗಬೇಕು."[೬]

ಅಂದಿನ ಸಮಕಾಲೀನ ಸಮಾಜದಲ್ಲಿದ್ದ ಇಂತಹ "ಸಂಸ್ಕೃತಿ" ಅವರ ಅದೆಷ್ಟೋ ಕೀರ್ತನೆಗಳಿಗೆ ವಿಷಯವಾಗಿದೆ.

"ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೇ ಕೂಗಿದರೂ ದನಿ ಕೇಳಲಿಲ್ಲವೆ" ಎಂದು ಅವರು ಭಗವಂತನನ್ನು ಕುರಿತು ಹಾಡಿದರೆ, "ಶ್ರೀಕೃಷ್ಣನೇ ಅವರ ಭಕ್ತಿಗೆ ಮೆಚ್ಚಿ ತಿರುಗಿ ದರ್ಶನವಿತ್ತಾ !" ಎಂದು ಇವರು ವದಂತಿಯನ್ನು ಹಬ್ಬಿಸಿ ಅಪಹಾಸ್ಯ ಮಾಡಿದರು. ಈ ಕತೆಯ ಹಿಂದಿರುವ ವಾಸ್ತವಾಂಶ, ಸತ್ಯ ಎಷ್ಟರಮಟ್ಟಿಗೆ ನಿಜ ಎಂಬುದನ್ನು ಕುರಿತು ಚಿಂತಿಸಬೇಕಾಗಿದೆ. "ಇದು ನಿಜವಲ್ಲ, ಸುಳ್ಳು." ಎಂದು ನಮಗೆ ತಿಳಿದಿದ್ದರೂ, ಈ ವದಂತಿಯ ಹಿಂದಿರುವ ಆಶಯ ಆ ಕಾಲದ ಜನರ ಮನಸ್ಥಿತಿ, ರೂಢಿ, ಸಂಪ್ರದಾಯ, ಪದ್ಧತಿಗಳೊಂದಿಗೆ ಸಮಕಾಲೀನ ಸಮಾಜದೊಳಗಿದ್ದ ಸಂಸ್ಕೃತಿಯನ್ನು ಪ್ರಸ್ತುತಪಡಿಸುತ್ತದೆ. "ನಮ್ಮ ಪೂರ್ವಿಕರು ಕನಕದಾಸರಂತಹವರಿಗೆ ಇಷ್ಟು ಅವಮಾನ, ಹಿಂಸೆ, ನೋವು, ದುಃಖಗಳನ್ನು ಕೊಟ್ಟರು ಅವರ ಸಂಸ್ಕೃತಿ ಹೀಗಿತ್ತು." ಎಂದು ಹೇಳಲು ನಮಗೆ ಅವಮಾನ ಕಾಡುತ್ತದೆ. ಪರಿಣಾಮವಾಗಿ, ಇಂತಹ ದಂತಕಥೆಗಳ ಸೃಷ್ಟಿಯಾಗಿತ್ತದೆ. ಈ ಪ್ರಕರಣವೊಂದು ಉದಾಹರಣೆಯ ಘಟನೆಯಷ್ಟೇ. ಆದರೆ "ಕನಕದಾಸರಿಗೆ ಸಂಬಂಧಿಸಿದ ಎಲ್ಲಾ ಘಟನೆಗಳನ್ನೂ ಇದೇ ರೀತಿ ತಿರುಚಿ ಒಂದೊಂದು ಅಪೂರ್ವ ದಂತಕಥೆಗಳಂತೆ ಸೃಷ್ಟಿಸಲಾಗಿದೆ" ಎನ್ನುವುದನ್ನು ನಾವು ತಿಳಿಯಬಹುದಾಗಿದೆ.

"ಮೋಹನ ತರಂಗಿಣಿ" ಕೃತಿಯಲ್ಲಿ ಕನಕದಾಸರು ಸ್ವತಃ ತಾವೇ, "ತಾವೇನು ಅಷ್ಟೊಂದು ವಿಶೇಷವಾಗಿ ಕಲಿತವರಲ್ಲವೆಂದೂ, ಹುಟ್ಟಿನಿಂದ ಹೀನರೆಂದು ಪರಿಗಣಿತವಾಗಿರುವುದನ್ನು ಅದಕ್ಕಾಗಿ ಗುರುಗಳಿಂದ ಮಂತ್ರೋಪದೇಶಕ್ಕೆ ಅನರ್ಹನೆಂದು "ಕೋಣ ಮಂತ್ರ ಜಪ"ದ ಉಪದೇಶವಾಗಿದ್ದನ್ನೂ ವ್ಯಕ್ತಪಡಿಸಿದ್ದಾರೆ. ಆದರೂ ಕನಕದಾಸರ ಕೀರ್ತನೆಗಳನ್ನಾಗಲಿ, ಮುಂಡಿಗೆಗಳನ್ನಾಗಲಿ ಅಥವಾ ಕಾವ್ಯಗಳನ್ನಾಗಲಿ ಅಧ್ಯಯನ ಮಾಡಿದಾಗ ನಿಜವಾಗಲೂ ನಮಗೆ ಅವರೊಳಗಿದ್ದ ಜೀವನಾನುಭವ, ಸಾಹಿತ್ಯಕ ಪರಿಶ್ರಮ– ಈ ಎಲ್ಲದರ ಬಗೆಗೆ ಮನದಟ್ಟಾಗುತ್ತದೆ. ಮತ್ತು ಈ ದೃಷ್ಟಿಯಿಂದ ನಾವು ಸತ್ಯವನ್ನು ಕಂಡುಕೊಳ್ಳಬೇಕಾಗಿದೆ. ಕನಕದಾಸರ ಸಮಕಾಲೀನ ಜನರ ಆಲೋಚನಾ ವಿಧಾನ, ಜೀವನ ಧೋರಣೆಗಳು ತಿಳಿದುಕೊಂಡು ಯಶಸ್ವಿಯಾಗಲು ಇವರ ಕೃತಿಗಳೇ ನಮಗೆ ಸಾಕಷ್ಟು ನೆರವಾಗುತ್ತವೆ.

ಇಲ್ಲಿ ಪ್ರಮುಖವಾಗಿ ನಾನು ಇನ್ನೊಂದು ವಿಷಯ ಅತ್ಯಂತ ಪ್ರಚಲಿತದಲ್ಲಿರುವ, ಜನಪ್ರಿಯ ಸಮಸ್ಯೆಗೆ ಸಿಲುಕಿಕೊಂಡಿರುವ ಮತ್ತು ಸಂವಾದಗ್ರಸ್ತ ವಿಚಾರವೆಂದೇ ಪ್ರಖ್ಯಾತಿ ಹೊಂದಿರುವ ಅಂಶದ ಬಗ್ಗೆ ಚಿಂತಿಸುವುದಾದರೆ; ಕನಕದಾಸರ "ಕೃತಿಗಳ ಚೌರ್ಯ್ಯ", ಮತ್ತು "ಅಂಕಿತ". "ಕೋಣ ಮಂತ್ರ ಜಪ"ದ ಉಪದೇಶ ಪಡೆದ ವೇಳೆಯಲ್ಲಿ ರಚಿಸಿದ ಕೃತಿಗಳಿಗೆ ಕನಕದಾಸರು ಅಂಕಿತವನ್ನಿಡುವಾಗಿ ವಿಚಲಿತಗೊಂಡಿರುವುದನ್ನು ನಾವು ಸ್ಪಷ್ಟವಾಗಿ ಕಾಣುತ್ತೇವೆ.

ಕನಕದಾಸರು ಯಾವ ಸಂಪ್ರದಾಯದವರು, ಅವರ ರೂಢಿ, ಪದ್ಧತಿಗಳು ಹೇಗಿದ್ದವು? ಯಾವ ಪಂಥವನ್ನು ಅವರು ಅನುಸರಿಸುತ್ತಿದ್ದರು? ಎನ್ನುವ ಪ್ರಶ್ನೆಗಳು ನಮ್ಮ ಎದಿರಾಗುತ್ತವೆ ಮತ್ತು ನಮ್ಮನ್ನು ಕಾಡುತ್ತವೆ, ಇಂತಹ ಪ್ರಶ್ನೆ, ಸಮಸ್ಯೆಯನ್ನು ಕಂಡು ಹಿಡಿದಾಗ ಸಿಗುವ ಉತ್ತರದಲ್ಲಿ ಕನಕದಾಸರ ಆಧ್ಯಾತ್ಮಿಕ ಸಾಧನೆಯ ರಹಸ್ಯ ಅಡಗಿರುವುದು ನಮಗೆ ತಿಳಿಯುತ್ತದೆ. ಕನಕದಾಸರು ಶ್ರೀವೈಷ್ಣವರ ಕಣ್ಣಿಗೆ ಶ್ರೀವೈಷ್ಣವರಾಗಿ, ಮಾಧ್ವರ ಕಣ್ಣಿಗೆ ಮಾಧ್ವರಾಗಿಯೂ ಕಾಣಿಸುತ್ತಾರೆ. ಇದನ್ನೇ ನೇರವಾಗಿ ಹೇಳುವುದಾದರೆ, ಅವರು ಯಾವ ಸಂಪ್ರದಾಯಕ್ಕೂ ಬದ್ಧರಾದವರಲ್ಲ; ಯಾವ ಪಂಥಕ್ಕೂ ಸೀಮಿತವಾದವರಲ್ಲ, ಬದಲಿಗೆ ಅವರೊಬ್ಬ ಸ್ವತಂತ್ರ ಚಿಂತಕರು ಎನ್ನುವುದನ್ನೇ ತಿಳಿಯುತ್ತೇವೆ. ಅಷ್ಟೇಅಲ್ಲ, ಕನಕದಾಸರ ಮುಖ್ಯಗುರಿ "ಸಾಹಿತ್ಯಸೃಷ್ಟಿಯೂ ಆಗಿರಲಿಲ್ಲ. ಆಧ್ಯಾತ್ಮಿಕ ಸಾಧನೆಯೇ ಆಗಿತ್ತು. ಆದರೆ ಅವರು ತಮ್ಮ ಸ್ವಂತ ಬದುಕಿನೊಳಗೆ ಕಂಡಂತಹ ಅನೇಕ ವಿಧದ ನಿರಾಶೆ, ದುರಂತಗಳು ಮತ್ತು ಯುದ್ಧಗಳಲ್ಲಿ ತಾವು ಸ್ವತಃ ಕಣ್ಣಾರೆ ಕಂಡ ಸಾವು–ನೋವುಗಳ ಹೃದಯವಿದ್ರಾವಕ ಘಟನೆಗಳು ಅವರು ಸಂಸಾರ, ದೊರೆತನ ಎಲ್ಲವನ್ನೂ ತೊರೆಯುವಂತೆ ಪ್ರೇರೇಪಿಸಿದವು. ಮತ್ತು ಗುರುಸೇವೆಯಲ್ಲಿ ಕೃತಕೃತ್ಯರಾಗುವಂತೆ ಮಾಡಿತು. ಆಧ್ಯಾತ್ಮ ಸಾಧನೆಯ ಉತ್ತುಂಗ ಶಿಖರವನ್ನೇರಿ ಮಹಾ ಸಂತರೆನಿಸಿದರು. ಸಾಮಾಜಿಕ ಲೋಪ–ದೋಷಗಳನ್ನಳೆಯುತ್ತಾ, ತ್ಯಾಗಮಯ, ವೈರಾಗ್ಯ ಜೀವನ ನಡೆಸಿದರು. ಸಮಾಜದಲ್ಲಿ ತುಂಬಿದ್ದ ಅಸಮಾನತೆಯಿಂದ ಕೂಡಿದ್ದ ಸಂಸ್ಕೃತಿ ಅವರನ್ನು ಮತ್ತಷ್ಟು "ವಿರಕ್ತಿ" ಎನ್ನುವ ಪಾತಾಳಕ್ಕೆ ದೂಡಿತು. ಆಧ್ಯಾತ್ಮಿಕ ಜಗತ್ತಿನೊಳಗೆ, "ಜೀವನ" ಎನ್ನವುದೊಂದು ಯುದ್ಧ, ರಣರಂಗವಿದ್ದಂತೆ. ಅಲ್ಲಿ ನಾವು ಅರಿಷಡ್ವರ್ಗಗಳೆಂಬ ಶತ್ರುಗಳೊಡನೆ ಹೋರಾಡುತ್ತೇವೆ. ದೇಶವನ್ನು ಶತ್ರುಗಳಿಂದ ಕಾಪಾಡಲು ಈ ಭೌತಿಕ ಜಗತ್ತಿನೊಳಗೆ ನಡೆದ, ನೋಡಿದ ಯುದ್ಧ, ಸಾವು–ನೋವು ಇವರ ಹೃದಯವನ್ನು ಕಲ್ಲಾಗಿಸಿದರೆ; ಹೆಂಡತಿಯ ಸಾವು ಇವರ ಭೌತಿಕಾಸಕ್ತಿಗಳಿಗೆ ಪೂರ್ಣವಿರಾಮವನ್ನೇ ತಂದೊಡ್ಡಿತು. ನಂತರ ಆಧ್ಯಾತ್ಮಿಕ ಸಾಧನೆಯಲ್ಲಿ ತೊಡಗಿದ ಇವರ ಜೀವನದಲ್ಲಿ ಅನೇಕ ಪರಿವರ್ತನೆಗಳಾದವು. ಸತ್ಯದ ಹುಡುಕಾಟಕ್ಕೆ ತೊಡಗಿದ ಅವರ ಮನಸ್ಸು ಆಯಾಯ ಕಾಲಘಟ್ಟಗಳಲ್ಲಿ ಅನೇಕ ಪ್ರೇರಣೆ, ಪ್ರಭಾವಗಳಿಗೆ ಒಳಗಾಗಿರುವುದನ್ನು ಅವರ ಕೃತಿಗಳ ಸಹಾಯದೊಂದಿಗೆ ತಿಳಿಯುತ್ತೇವೆ.

ಕಲಿಕೆಯ ಮುಖೇನ ನಡವಳಿಕೆಯನ್ನು ಮುಂದಕ್ಕೆ ಸಾಗಿಸುವುದರೊಡನೆ, ಅದರಲ್ಲೂ ವಿಶೇಷವಾಗಿ ಸಮೂಹದ ಮೂಲಕ ನೆಲೆಯೂರಿದ ಕಲಿಕೆಯನ್ನು ಸಾಗಿಸುವುದರಿಂದ, ವಾಸ್ತವವಾಗಿ ಘಟನೆಗಳೇ ಒಂದು ನೂತನ ಕ್ರಮವು ಆರಂಭವಾಗುತ್ತದೆ, ಸಮೂಹದ ಮುಖಾಂತರ ಸಂಸ್ಕೃತಿಯನ್ನು ಕಲಿಯುತ್ತೇವೆ, ಉಪಯೋಗಿಸುತ್ತೇವೆ ಮತ್ತು ಬದಲಿಸುತ್ತೇವೆ. ಆದ್ದರಿಂದ ಇನ್ನು ಮುಂದಾದರೂ; ಕನಕದಾಸರಂತಹ ಒಬ್ಬ ಮಹಾನ್ ಪುರುಷರಿಗೆ ಸಮಾಜದಲ್ಲಿ ನಿಜವಾಗಲೂ ದೊರೆಯಬೇಕಾದ ಪ್ರಾಶಸ್ತ್ಯ, ಗೌರವಗಳು ಸಲ್ಲಿಸಬೇಕಾದ ಸಂಸ್ಕೃತಿ ನಮ್ಮಲ್ಲಿ

ಬೆಳೆಯಬೇಕಾಗಿದೆ ; ಮತ್ತು ಅವರ ಕೃತಿಗಳ ಸದುಪಯೋಗವಾಗಿ ಸಮಾಜದಲ್ಲಿರುವ ಸಂಸ್ಕೃತಿ ಮತ್ತಷ್ಟು ಅಭಿವೃದ್ಧಿಹೊಂದಬೇಕಾಗಿದೆ.

*** ** ***

## ✣ ✻ ✣ ಅಡಿಟಿಪ್ಪಣಿಗಳು ✣ ✻ ✣

೧. ಡಾ. ಎಸ್. ಎಸ್ ಕೋತಿನ, "ಕಸಾದ", ಸಂ–೧, ಪು.೬೦

೨. ಡಿ. ಎಚ್. ಮಲ್ಲಿನಾಥಯ್ಯ, "ಸಮಾಜಶಾಸ್ತ್ರ ಕೈಪಿಡಿ", ಪು.೪೩

೩. —— ""—————— ಅದೇ, ಪು.೨೨, ೨೩

೪. ——""""—————— ಅದೇ, ಪು.೬೬

೫. ಡಾ. ಎನ್. ಕೆ. ರಾಮಶೇಷನ್, "ಹರಿದಾಸ ಸಾಹಿತ್ಯ ಆಂದೋಲನ", ಪು.೧೯೯

೬. ಬನ್ನಂಜೆ ಗೋವಿಂದಾಚಾರ್ಯರು, "ಕನಕೋಪನಿಷತ್ತು", ಪು.೧

*** ** ***

## ಅಧ್ಯಾಯ – ೬. : **ಉಪಸಂಹಾರ**

---

ಕನಕದಾಸರು "ದಾಸರಲ್ಲಿ ಕವಿಗಳು". ಅದೇ ಅವರ ವೈಶಿಷ್ಟ್ಯ. ಇವರೊಬ್ಬರನ್ನು ಬಿಟ್ಟರೆ, ದಾಸಪರಂಪರೆಯಲ್ಲಿ ಉಳಿದವರಲ್ಲಿ ಎಲ್ಲರೂ ಕೀರ್ತನಕಾರರಷ್ಟೇ. ಕವಿಗಳಲ್ಲ. ಅಂದರೆ, ಅವರ ಕೀರ್ತನೆಗಳಲ್ಲಿ ಕಾವ್ಯತ್ವ ಇಲ್ಲವೆಂದಲ್ಲ. ಆದರೆ ಅವರಲ್ಲಿ ಕನಕದಾಸರಂತೆ ಸ್ಥಾಯಿಯಾದ "ಕಾವ್ಯಪ್ರಜ್ಞೆ" ಇಲ್ಲ. ಕನಕದಾಸರು ದಾಸ ಪರಂಪರೆಗೆ ಒಳಗಾಗದೆ ಇರುತ್ತಿದ್ದರೂ; ಅವರಲ್ಲಿನ ಕಾವ್ಯಪ್ರಜ್ಞೆ ಕಾವ್ಯರೂಪದಲ್ಲಿ ತನ್ನ ಅಭಿವ್ಯಕ್ತಿಯನ್ನು ಕಂಡುಕೊಳ್ಳದೆ ಇರುತ್ತಿರಲಿಲ್ಲ. ಹೀಗಾಗಿ ಕನಕದಾಸರ ವ್ಯಕ್ತಿತ್ವ ದಾಸಪರಂಪರೆಯ ಭಕ್ತಿಪ್ರಜ್ಞೆಗೆ ಒಳಗಾದರೂ, ಅವರ ಭಕ್ತಿಭಾವ ಕಾವ್ಯಪ್ರಜ್ಞೆಗೆ ಮೂಲಭಿತ್ತಿಯಾಗಿ ಪರಿಣಮಿಸಿತು. ಆದ್ದರಿಂದಲೇ ಅವರು ಕೇವಲ ಕೀರ್ತನಕಾರರಾಗಿ ಮಾತ್ರವಲ್ಲ ಕನ್ನಡ ಕವಿಗಳ ಸಾಲಿನಲ್ಲೂ ಅಗ್ರಗಣ್ಯರಾಗಿದ್ದಾರೆ.[೧]

ಕನಕದಾಸರ ಜೀವನದ ಎಲ್ಲಾ ಸಾಧನೆಗಳನ್ನೂ–ಸಿದ್ಧಿಗಳನ್ನೂ ಪರಿಭಾವಿಸಿದಾಗ "ಅವರ ಸ್ಥಾನ ಹತ್ತರೊಡನೆ ಹನ್ನೊಂದನೆಯದಲ್ಲ".– ಎನ್ನುವುದು ತಿಳಿಯುತ್ತದೆ.[೨]

ಕನಕದಾಸರ ಆಧ್ಯಾತ್ಮನಿಷ್ಠವಾದ ಭಕ್ತಿಪರವಾದ ಜೀವನ ಸಂದೇಶವು ಸ್ಫೂರ್ತಿ ನೀಡುತ್ತದೆ.[೩]

ಅವರ ಜೀವನವೇ ಕುಲದ ಸಂಕುಚಿತ ದೃಷ್ಟಿಗೆ ಸವಾಲಾಗಿ ಪರಿಣಮಿಸಿತು. ಅಂಥ ದೃಷ್ಟಿಯುಳ್ಳವರಿಂದ ಅವರು ಅವಮಾನಿತಗೊಂಡಿರಬಹುದಾದರೂ ಕೆರಳಲಿಲ್ಲ. ಬದಲಿಗೆ ತಮ್ಮ ದಿಟ್ಟ ನಿಲುವನ್ನು, ತರ್ಕಶುದ್ಧವಾಗಿ, ಉನ್ನತ ಮನೋಧರ್ಮದಿಂದ ಸಾರಿದ್ದಾರೆ, ವಾದಿಸಿದ್ದಾರೆ.

'॥ *ಹರಿಯೇ ಸರ್ವೋತ್ತಮ ಹರಿಯೇ ಸರ್ವೇಶ್ವರ । ಹರಿಯ ಚರಣ ಕಮಲವ ಕೀರ್ತಿಸುವವನೆ ಕುಲಜ* ॥' ಎಂದು ಹಾಡಿದ್ದಾರೆ.

"ಕುಲಕ್ಕಿಂತ ಗುಣ ಮುಖ್ಯ" ಎನ್ನುವುದನ್ನು ಜಗತ್ತಿಗೆ ತೋರಿಸಿಕೊಟ್ಟಿದ್ದಾರೆ.

ಕನಕದಾಸರ ಕೀರ್ತನೆಗಳು "ಅವರು ಹೇಗೆ ಭೂಮಿಯಲ್ಲಿ ಬೇರು ಬಿಟ್ಟು ಆಕಾಶದಲ್ಲಿ ಅರಳಿದ್ದರು". ಎನ್ನುವುದನ್ನು ಧ್ವನಿಸುತ್ತದೆ.[೪]

ಪರಂಪರೆಯ ಉತ್ತುಂಗ ಪರ್ವತದಲ್ಲಿರುವವರು ಶಿಖರವನ್ನೇರುವುದು ಅದ್ಭುತ ಸಾಧನೆಯಲ್ಲ; ಆದರೆ, ಖಣಿವೆಯಾಳದಲ್ಲಿದ್ದವರು ಶಿಖರವನ್ನೇರುವುದೇ ಅದ್ಭುತ ಸಾಧನೆ. – ಅದೇರೀತಿ ಕನಕದಾಸರು ವ್ಯಾಸರಾಜರ ಪಟ್ಟ

ಶಿಷ್ಯರಲ್ಲಿ ಒಬ್ಬರಾಗಿ, ಪಟ್ಟದಾನೆಯಂತೆ ಬಹು ಗಾಂಭೀರ್ಯದಿಂದ ಹಾದಿ-ಬೀದಿಗಳಲ್ಲಿ, ಗುಡಿ-ಗೋಪುರಗಳಲ್ಲಿ ಓಡಾಡಿದ್ದನ್ನು ಹಲವರು ಕಂಡು ಅಸಹನೆಯಿಂದ ಶ್ವಾನದಂತೆ ಬೊಗಳಿದ್ದು, ಅವರನ್ನು ಕಚ್ಚಲು ಹವಣಿಸಿದ್ದು ಅಸಹಜವೇನಲ್ಲ. ಇಂತಹ ನಿಮ್ನತೆಯನ್ನು, ಕುಬ್ಜತೆಯನ್ನು ನಿಚ್ಚಳವಾಗಿ ನೋಡುತ್ತಲೇ ಕನಕದಾಸರು ಗೋಪುರದಷ್ಟು ಎತ್ತರಕ್ಕೆ ಬೆಳೆದರು.

'॥ ಆದಿಕೇಶವನೊಲಿದ ಮೇಲೆ ಯಾತರ ಕುಲವಯ್ಯಾ ॥'

–ಎನ್ನುವ ಸಾರ್ವತ್ರಿಕ ಸತ್ಯವನ್ನು ಬಿಚ್ಚಿಟ್ಟ ಮೇಲಾದರೂ; ಮಾನವೀಯತೆಗೆ ಮಾರಕವಾದ ಜಾತೀಯತೆ ಎಂಬ ಭೂತವನ್ನು ಸಮಾಜದಿಂದ ತೊಲಗಿಸಲೇಬೇಕು. ಅದೆಷ್ಟೋ ಜನ ತಮ್ಮ ಮನದೊಳಗೆ ಒಂದು ಹೊಲಗೇ–ರಿಯನ್ನು ಸೃಷ್ಟಿಮಾಡಿಕೊಂಡು ಅವರೇ ಹೊಲೆಯರಂತಿರುತ್ತಾರೆ. ಅಂತಹ ಹೊಲಗೇರಿಯನ್ನು ಮೊದಲು ನಿರ್ನಾಮ ಮಾಡಬೇಕು. "ಅನ್ಯ"ರನ್ನು ಕೀಳಾಗಿ ನೋಡುವ ಭಾವನೆ ಬಿಡಬೇಕು. ಎಲ್ಲರೂ "ಸಮಾನರು" ಎನ್ನುವ ಭಾವನೆಯನ್ನು ಬೆಳೆಸಿಕೊಳ್ಳಬೇಕು. ಈ ದೃಷ್ಟಿಯಿಂದ "ಕನಕದಾಸರ ಸಮಾಜಮುಖಿ ಕೀರ್ತನೆಗಳು" ಜನಸಾಮಾನ್ಯರಿಗೆ ಸಹಾಯಕವಾಗುತ್ತದೆ.

"ಶೂದ್ರ ಜನಾಂಗದಿಂದ ಬಂದ ತಿಮ್ಮಪ್ಪ ಕನಕದಾಸರಾದದ್ದು ಒಂದು ರೀತಿಯ "ಪವಾಡ" ಅನ್ನಿಸುತ್ತದೆ. ಇದು ಆ ಕಾಲದ ಭಕ್ತರು, ಸಂತರು, ದಾಸರು – ಇಡೀ ಯುಗವನ್ನೇ ಆಧ್ಯಾತ್ಮಿಕ ಹಂತದಲ್ಲಿಯೇ ಮುಳುಗಿಸಿದ್ದುದರ ಹಿನ್ನೆಲೆ."[೫]

ಸಾಮಾಜಿಕಪ್ರಜ್ಞೆಯ ನೆಲೆಗಳನ್ನು ಒಳಗೊಂಡ ಕನಕದಾಸರ ಕೀರ್ತನೆಗಳು ಅಂದಿನ ಸಾಮಾಜಿಕ ಪರಿಸರದ ವ್ಯಕ್ತರೂಪವಾದಂತೆ ಅವರ ವ್ಯಕ್ತಿತ್ವದ ಪ್ರಕಟರೂಪವೂ ಆಗಿರುತ್ತದೆ. ಇಲ್ಲಿ ಅವರ ಸಾಮಾಜಿಕಪ್ರಜ್ಞೆ ಕವಿಯ ವೈಯಕ್ತಿಕ ಸ್ತರದ ಅಂದರೆ ತನ್ನ ಸಮಾಜದಿಂದ ತನಗೆ ಮಾತ್ರ ಒದಗಬಹುದಾದ ವ್ಯಕ್ತಿಗತ ಅನುಭವಗಳ ಅಂಚನ್ನು ಮೀರಿನಿಲ್ಲುಂತಹದ್ದು. ಅಂದರೆ, ಒಂದು ನಾಡಿನ ಸಮಗ್ರ ಸಂಸ್ಕೃತಿಯ ವಿಶಾಲ ವಿಸ್ತಾರಕ್ಕೆ ಹರಡಿಕೊಳ್ಳುವಂತಹದ್ದು.[೬]

"ಅನುಭವ ಎಂಬ ಮಜ್ಜಿಗೆಯನ್ನು ತತ್ತ್ವಮಂಥನವೆಂಬ ಕಡಗೋಲಿನಿಂದ ತೆಗೆದಂತಹ ನವನೀತವೇ ಕನಕದಾಸರ ಈ ಸಮಾಜಮುಖಿ ಕೀರ್ತನೆಗಳು". ಮಹಾತ್ಮ್ಯಾಜ್ಞಾನವನ್ನು ಶ್ರುತಪಡಿಸಿವ ಕನಕದಾಸರ ಒಂದೊಂದು ಕೀರ್ತನೆಯೂ, ಸತ್ಯಘಟನೆಗಳ ಆಧಾರದ ಮೇಲೆ ಮೂಡಿಬಂದು, ಕಾವ್ಯಾತ್ಮಕವಾಗಿ ಹೇಳುವ ಸುಂದರ ಭಾವಗೀತೆಗಳಂತಿವೆ.

ಪ್ರಾಚೀನ ಕಾವ್ಯಮೀಮಾಂಸಕನಾದ ಮಮ್ಮಟನು ಸಾಹಿತ್ಯದಿಂದ ಉಂಟಾಗುವ ಪ್ರಯೋಜನಗಳನ್ನು, '॥ ಕಾವ್ಯಂಯಶಸೇರ್ಥಕೃತೇ ವ್ಯವಹಾರವಿದೇಶಿವೇತರಕ್ಷತೆ । ಸದ್ಯಃ ಪರನಿಮಃ ಕಾಂತಾಸಮ್ಮಿತತಯೋಪದೇಶಯುಜೇ ॥' – ಎಂದು ಹೇಳಿರುವಂತೆ, ಕನಕದಾಸರ ಸಾಮಾಜಿಕ ಕೀರ್ತನೆಗಳು ಎಂದೆಂದಿಗೂ ಅಮರ, ವಿಫುಲ ಫಲವನ್ನೇ ಸಮಾಜಕ್ಕೆ ನೀಡುತ್ತದೆ. "ಅವರ ಕೃತಿಗಳು "ಜಾತೀಯತೆ" ಎಂಬ ಕೆಸರಿನಿಂದ ಉದಯಿಸಿರುವ ಕಮಲಗಳು."[೭]

✷✷✷ ✷✷ ✷✷✷

## ✣ ✳ ✣ ಅಡಿಟಿಪ್ಪಣಿಗಳು ✣ ✳ ✣

೧. ಡಾ. ಜಿ.ಎಸ್. ಶಿವರುದ್ರಪ್ಪ, "ಕನಕದಾಸರ ವಿಶಿಷ್ಟತೆ", ಪು.೨೩೯

೨. ಡಾ. ಸಿ.ಪಿ.ಕೆ. "ಕನಕದಾಸರ ಅನನ್ಯತೆ", ಪು.೨೫೪

೩. ರಂ.ಶ್ರೀ.ಮುಗುಳಿ, "ಕನಕದಾಸರ ಜೀವನ ಸಂದೇಶ", ಪು.೨೫೯

೪. ಸುಧಾಕರ, "ಕನಕದಾಸರ ಮಾನವೀಯ ಮಿಡಿತಗಳು", ಪು.೨೩೨

೫. ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್, "ಕನಕದಾಸರ ತಾತ್ವಿಕ ದೃಷ್ಟಿಕೋನ", ಪು.೨೩೪

೬. ಡಾ. ಎಸ್. ಎಸ್. ಕೋತಿನ "ಕನಕದಾಸರ ಕೃತಿಗಳಲ್ಲಿ ಸಾಮಾಜಿಕ ನೆಲೆ", ಪು.೬೮೯

೭. ಟಿ. ಮಹಾಬಲ ಅಡಿಗ, "ಕಸಾದ", "ಕನಕದಾಸರ ಸಾಹಿತ್ಯ ವಿಡಂಬನೆ", ಪು.೭೧೪

✳✳✳ ✶✶ ✳✳✳

## ಅಧ್ಯಾಯ – ೮.: ಗ್ರಂಥಋಣ

---


1. "ಕನಕ ಸಾಹಿತ್ಯ ದರ್ಶನ", ಸಂ–1, ಸಂಪಾದಕರು: ಡಾ.ದೇ.ಜವರೇಗೌಡ, ಪ್ರಕಟಣೆ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, 1990
2. "ಕನಕ ಕಿರಣ", ಸಂಪಾದಕರು: ಕಾ.ತ.ಚಿಕ್ಕಣ್ಣ, ಪ್ರಕಟಣೆ : ಕಾಳಿದಾಸ ಸಾಂಸ್ಕೃತಿಕ ಸಂಘ, 1982
3. "ದಾಸಮಾರ್ಗ", ಲೇಖಕರು : ಪ್ರೊ. ಎ.ವಿ. ನಾವಡ, ಪ್ರಕಾಶಕರು : ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ, ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ, 2004
4. "ಸಮಗ್ರ ದಾಸ ಸಾಹಿತ್ಯ", "ಕನಕದಾಸರ ಕೀರ್ತನೆಗಳು", ಭಾಗ–1,2 ಸಂಪಾದಕರು: ಪ್ರೊ. ಸುಧಾಕರ, ಪ್ರಕಟಣೆ: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, 2003
5. "ದಾಸ ಸಾಹಿತ್ಯದ ತವನಿಧಿಯಲ್ಲಿ", ಲೇಖಕರು : ಪ್ರೊ.ವಸಂತ ಕುಷ್ಟಗಿ, ಪ್ರಕಾಶನ: ಶ್ರೀಬತ್ತೇರೇಶ ಪ್ರಕಾಶನ, 2012
6. "ಕನ್ನಡ ಸಾಹಿತ್ಯ ಚರಿತ್ರೆ", ಲೇಖಕರು: ತ.ಸು. ಶಾಮರಾಯ, ಪ್ರಕಟಣೆ: ತ.ವೆಂ.ಸ್ಮಾರಕ ಗ್ರಂಥಮಾಲೆ, 1964
7. "ಕೀರ್ತನಕಾರರು", ಲೇಖಕರು: ಎಚ್. ಎಸ್. ವೆಂಕಟೇಶ ಮೂರ್ತಿ, ಪ್ರಕಟಣೆ: ಬೆಂಗಳೂರು ವಿ.ವಿ., 1975
8. "ಕನಕದಾಸೋತ್ತಮ", ಲೇಖಕರು: ಸುಧಾಕರ, ಪ್ರತಿಭಾ ಪ್ರಕಾಶನ, 1997
9. "ವಿಜಯನಗರದ ವಿಪತ್ಕಾಲ", ಲೇಖಕರು : ಎಸ್.ಬಿ.ಕೋಡದ, ಪ್ರಭಾ ಪ್ರಕಾಶನ, 1999
10. "ವಿಜಯನಗರದ ಕಲೆ ಮತ್ತು ಸಾಹಿತ್ಯ", ಲೇಖಕರು: ಪುಲುಮತಿ ಶ್ಯಾಮರಾವ್, ಪ್ರಕಾಶಕರು : ಮೈಸೂರು ಸಂಸ್ಥಾನ ಸಾಹಿತ್ಯ ಮತ್ತು ಸಂಸ್ಕೃತಿ ಇಲಾಖೆ. 1956
11. "ಹರಿದಾಸ ಸಾಹಿತ್ಯ ಪರಂಪರೆ", ಲೇಖಕರು : ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ, ಪ್ರಕಟಣೆ : ಭಾರತೀಯ ವಿದ್ಯಾಭವನ, 1997
12. "ಜನಪ್ರಿಯ ಕನಕ ಸಂಪುಟ", ಪ್ರಕಾಶನ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, 1988
13. "ಹರಿದಾಸ ಆಂದೋಲನ", ಲೇಖಕರು : ಡಾ. ಎನ್.ಕೆ. ರಾಮಶೇಷನ್, ಟಿ.ಟಿ.ಡಿ. ಪ್ರಕಟಣೆ, 1991
13. "ಕನಕದಾಸ", ಲೇಖಕರು : ಟಿ. ಎನ್. ನಾಗರತ್ನ, ಸಾಹಿತ್ಯ ಅಕಾಡೆಮಿ ಪ್ರಕಟಣೆ, 2000
14. "ಹರಿದಾಸ ಸಾಹಿತ್ಯ ಸಾರ", ಲೇಖಕರು : ಡಾ. ಜಿ. ವರದರಾಜು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ. ಪ್ರಕಟಣೆ, 1987
15. "ಕನಕೋಪನಿಷತ್ತು", ಲೇಖಕರು : ಬನ್ನಂಜೆ ಗೋವಿಂದಾಚಾರ್ಯ, ಕನಕದಾಸ ಅಧ್ಯಯನ ಸಂಶೋಧನ ಪೀಠ ಪ್ರಕಟಣೆ, 2008
16. "ದಾಸ ಪರಂಪರೆ", ಲೇಖಕರು : ನಿರುಪಮಾ ಮತ್ತು ಲಲಿತಾ ಶಾಸ್ತ್ರಿ, ಆರತಿ ಪ್ರಕಾಶನ, 1999.


*** ** ***

